# ಮಾನಸ

ತಿಂಗಳ ಪತ್ರಿಕೆ

ಸಂಪುಟ : ೯ ಸಂಚಿಕೆ : ೨

ಫೆಬ್ರವರಿ, ಮಾರ್ಚ್-೧೯೯೪

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

ವಿಳಾಸ :

"**ಮಾನಸ**" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು–560 067

**ಸಂಪರ್ಕ ವಿಳಾಸ**

ನಂ–457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು-560 086

ಸೂಚನೆ : ಬಿಡಿ ಪ್ರತಿ : **3. 00 ರೂ.**
ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.


**ಈ ಸಂಚಿಕೆಯಲ್ಲಿ...**



---

ಮುಖಪುಟದ ಕೊಡುಗೆ : **ಪಿ. ಎ. ಉಷಾ**
ಮೈಸೂರು


ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು-೫೬೦ ೦೬೭



# ಸಂಪಾದಕೀಯ

1994ರ ಜನವರಿ 23ರಿಂದ 26ರ ವರೆಗೆ ತಿರುಪತಿಯಲ್ಲಿ ನಡೆದ ಐದನೆಯ ಭಾರತೀಯ ಮಹಿಳಾ ಸಮ್ಮೇಳನದಲ್ಲಿ ಸುಮಾರು ನಾಲ್ಕು ಸಾವಿರ ಮಹಿಳೆಯರು ಭಾಗವಹಿಸಿದ್ದರು. ಗ್ರಾಮೀಣ ಹಾಗೂ ಕೃಷಿ ಕಾರ್ಮಿಕ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಪಾಲ್ಗೊಂಡುದುದು ಈ ಸಮ್ಮೇಳನದ ಒಂದು ವಿಶೇಷ ಸಂಗತಿ. ಆಂಧ್ರದ "ಮಹಿಳಾ ಶಕ್ತಿ" ಸಂಘಟನೆಯವರು ಸಂಘಟಿಸಿದ ಈ ಸಮ್ಮೇಳನ ಹಲವಾರು ವಿಷಯಗಳ ಚರ್ಚೆಗೆ ಅವಕಾಶ ಮಾಡಿಕೊಟ್ಟಿತ್ತು. ಆರೋಗ್ಯ ಮತ್ತು ಜನಸಂಖ್ಯೆ, ಹೊಸ ಆರ್ಥಿಕ ನೀತಿ, ಹಿಂಸೆ, ಲೈಂಗಿಕತೆ, ಕೋಮುವಾದ ಮತ್ತು ರಾಜಕೀಯ, ಇತರ ಸಮೂಹ ಚಳುವಳಿಗಳೊಂದಿಗೆ ಮಹಿಳಾ ಚಳುವಳಿಯ ಸಂಬಂಧ ಇಂತಹ ಹಲವಾರು ವಿಷಯಗಳನ್ನು ವಿಭಿನ್ನ ವೇದಿಕೆಯಲ್ಲಿ ಚರ್ಚಿಸಲಾಯಿತು. ಇತರ ಚಳುವಳಿಗಳ ಜೊತೆಗೆ ಮಹಿಳಾ ಚಳುವಳಿ ಹೊಂದಬೇಕಾದ ಸಂಬಂಧದ ಮೇಲೆ ಹೆಚ್ಚು ಗಮನ ನೀಡಲಾಗಿತ್ತು. ಹೊಸ ಆರ್ಥಿಕ ನೀತಿಯ ಹಿನ್ನೆಲೆಯಲ್ಲಿ ವಿದೇಶೀ ಅನುದಾನ ಪಡೆಯುತ್ತಿರುವ ಮಹಿಳಾ ಸಂಘಟನೆಗಳ ನಿಲುವುಗಳು ಎಂತಹುದು ಎಂಬ ಪ್ರಶ್ನೆ ಮೂಡಿ ಬಂತು. ಲೈಂಗಿಕತೆಗೆ ಸಂಬಂಧಪಟ್ಟ ಚರ್ಚೆಯಲ್ಲಿ ಅಧಿಕ ಮಹಿಳೆಯರು ತಮ್ಮ ವೈಯಕ್ತಿಕ ಬದುಕಿನ ಏರು-ಪೇರುಗಳಲ್ಲಿ ಮಹಿಳೆಯರ ನಡುವಿನ ಸಂಬಂಧ, ಸ್ನೇಹ ಎಷ್ಟು ಅಗತ್ಯ ಎಂಬುದನ್ನು ಹಂಚಿಕೊಂಡರು. ರಾಜ್ಯ ಹಾಗೂ ಮಹಿಳೆಗೆ ಸಂಬಂಧಪಟ್ಟ ಚರ್ಚೆಯಲ್ಲಿ ಪಂಚಾಯತ್ ರಾಜ್ಯ ವ್ಯವಸ್ಥೆಯಲ್ಲಿ ಮಹಿಳೆ ಹಾಗೂ ಅನುದಾನ ಪಡೆಯುವ ಸಂಘಟನೆಗಳ ಮಿತಿಗಳು ಇಂತಹ ವಿಷಯಗಳ ಮೇಲೆ ಬೆಳಕು ಚೆಲ್ಲಲಾಯಿತು.

ಮಹಿಳೆಯರನ್ನು ಹಾಗೂ ಇತರರನ್ನು ಸಂಘಟಿಸುವಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳು ಮುಖ್ಯ ಎಂಬುದು ಇಡಿಯ ಸಮ್ಮೇಳನ ಹೆಣೆದುಕೊಂಡಿದ್ದ ಸಾಂಸ್ಕೃತಿಕ ಚಟುವಟಿಕೆಗಳಿಂದ ಅಭಿವ್ಯಕ್ತಿಗೊಂಡಿತ್ತು. ಇಡಿಯ ಸಮ್ಮೇಳನದಲ್ಲಿ ಈ ಸಾಂಸ್ಕೃತಿಕ ಕಾರ್ಯಕ್ರಮದ ಛಾಪು ಎದ್ದು ಕಾಣುತ್ತಿತ್ತು.

ಸ್ತ್ರೀವಾದ ಹಲವಾರು ಆಯ್ಕೆಗಳುಳ್ಳ ಒಂದು ವಿಚಾರಧಾರೆ. ವಿಭಿನ್ನ ಆಯಾಮಗಳ ಹೊಂದಿರುವ ಸ್ತ್ರೀಯರ ಬದುಕಿಗೆ ವಿಭಿನ್ನ ಆಯ್ಕೆಗಳ ಸಾಧ್ಯತೆಯನ್ನು ಈ ವಿಚಾರಧಾರೆ ನಮ್ಮ ಮುಂದೆ ಇಟ್ಟಿದೆ. ಇಂತಹ ವೈವಿಧ್ಯತೆಗಳಲ್ಲಿಯೇ ಮಹಿಳಾ ಚಳುವಳಿ ಉಳಿಯುವುದು, ಬೆಳೆಯುವುದು ಅಗತ್ಯ. ಯಾವುದೇ ಪಕ್ಷ ರಾಜಕೀಯ ಗ್ರಹಿಕೆ ಈ ಭಿನ್ನ ಭಿನ್ನ ಆಯ್ಕೆಗಳ ಸಾಧ್ಯತೆಗಳನ್ನೇ ತಿರಸ್ಕರಿಸುವ ಅಪಾಯಕಾರಿ ನಿಲುವನ್ನು ತೆಗೆದುಕೊಳ್ಳುವುದು ಮಹಿಳಾ ಚಳುವಳಿಯ ಮುಕ್ತತೆಯ ಆಶಯವನ್ನೇ ಮುಚ್ಚಿ ಹಾಕಿಬಿಡುತ್ತದೆ. ತಿರುಪತಿಯಲ್ಲಿ ಸಮ್ಮೇಳನದ ಕೊನೆಯ ದಿನ ಇಂತಹ ಭಿನ್ನತೆಗಳನ್ನೇ ತಿರಸ್ಕರಿಸುವ ಧ್ವನಿ ಕೇಳಿ ಬಂದುದು ವಿಷಾದನೀಯ. ಮಹಿಳಾ ಚಳುವಳಿ, ಜಾತೀಯತೆ, ಬಂಡವಾಳಶಾಹಿತ್ವ ಹಾಗೂ ಪಿತೃ ಪ್ರಧಾನ ಸಮಾಜವನ್ನು ಒಟ್ಟಾಗಿ ಹೋರಾಡುತ್ತಲೇ ವೈವಿಧ್ಯ ಆಯ್ಕೆಗಳ ಮುಕ್ತತೆಯನ್ನು ಕಾಯ್ದುಕೊಳ್ಳಬೇಕಾದ ಅಗತ್ಯತೆಯ ಬಗ್ಗೆ ನಾವು ಗಂಭೀರವಾಗಿ ಆಲೋಚಿಸಬೇಕಾಗಿದೆ.

---

## ಮಹಿಳಾ ನಿಯೋಗ

ಹೆಚ್ಚುತ್ತಿರುವ ಮಹಿಳೆಯರ ಮೇಲಿನ ದೌರ್ಜನ್ಯವನ್ನು ಗಮನದಲ್ಲಿಟ್ಟುಕೊಂಡು ದೆಹಲಿ ರಾಜ್ಯ ಸರ್ಕಾರವು ವಿಶೇಷ ಮಹಿಳಾ ನಿಯೋಗವನ್ನು ನೇಮಿಸಲು ನಿರ್ಧರಿಸಿದೆ. ನಿಯೋಗಕ್ಕೆ ಹೆಚ್ಚಿನ ಅಧಿಕಾರವನ್ನು ನೀಡುವುದಾಗಿ ಹೇಳಿದೆ. ಕ್ಯಾಬಿನೇಟ್‌ನ ಸಮ್ಮತಿ ದೊರಕಿರುವ ನಿಯೋಗವನ್ನು ಜಾರಿಗೊಳಿಸುವ ಬಿಲ್ಲನ್ನು ಅಸೆಂಬ್ಲಿಯ ಬಡ್ಜೆಟ್ ಸೆಶನ್ ಮುಂದಿಡಲಾಗುವುದು. ರಾಷ್ಟ್ರೀಯ ಮಹಿಳಾ ನಿಯೋಗದ ನಿಟ್ಟಿನಲ್ಲಿ ರಚಿತವಾಗಿರುವ ಈ ನಿಯೋಗದ ಪೂರ್ವಸಿದ್ಧತೆಗಾಗಿ 1 ಲಕ್ಷ ರೂ.ಗಳನ್ನು ನೀಡಲಾಗುವುದು. 1993-94ರ ಸಾಲಿನಲ್ಲಿ ಈ ಆಯೋಗದಲ್ಲಿ ಐವರು ಸದಸ್ಯರಿರುವರು. ಮುಖ್ಯ ಕಾರ್ಯದರ್ಶಿ ಮೂವರು ಸದಸ್ಯರು ಹಾಗು ಸದಸ್ಯ ಕಾರ್ಯದರ್ಶಿಯನ್ನು ಒಳಗೊಂಡಿರುವ ಈ ನಿಯೋಗವು ಉಳಿದ ಸಿಬ್ಬಂದಿಯನ್ನು ರಾಜ್ಯ ಸರ್ಕಾರದಿಂದ ನಿಯೋಜಿಸುವುದು. ರಾಷ್ಟ್ರೀಯ ಮಹಿಳಾ ಆಯೋಗಕ್ಕಿರುವಷ್ಟೆ ಅಧಿಕಾರ ಪಡೆಯಲಿರುವ ರಾಜ್ಯ ಮಟ್ಟದ ಈ ಆಯೋಗವು ವರದಕ್ಷಿಣೆ ಹಾಗೂ ಇತರ ಮಹಿಳೆಯರ ಮೇಲಿನ ದೌರ್ಜನ್ಯಕ್ಕೆ ಸಂಬಂಧಪಟ್ಟಂತೆ ಹೆಚ್ಚು ಶ್ರಮ ಪೂರ್ವಕವಾಗಿ, ಶಕ್ತಿಯುತವಾಗಿ ಕೆಲಸ ಮಾಡಲಿದೆಯೆಂದು ಹೇಳಲಾಗಿದೆ.

---

# "ಸ್ಟೇಯಿಂಗ್ ಅಲೈವ್"

— ವಂದನಾ ಶಿವ

## — ಒಂದು ಕಿರುಪರಿಚಯ

ಸಿ. ಜಿ. ಮಂಜುಳಾ

1993ರ ಡಿಸೆಂಬರ್‌ನಲ್ಲಿ ಸ್ವೀಡನ್‌ನ ರೈಟ್ ಲವ್‌ಲಿ ಹುಡ್ ಪ್ರಶಸ್ತಿ ಸ್ವೀಕರಿಸಿದ ವಂದನಾ ಶಿವ ಅವರು ಭಾರತದ ಪರಿಸರ ಚಳುವಳಿಯಲ್ಲಿ ಪ್ರಮುಖ ಹೆಸರು.

ಮೂಲಭೂತವಾಗಿ ಅಣು ಭೌತ ವಿಜ್ಞಾನಿಯಾದ ವಂದನಾ ಶಿವ ಪರಿಸರ ಸಂರಕ್ಷಣೆಯ ಚಟುವಟಿಕೆಗಳಿಗಾಗಿ ವಿಜ್ಞಾನಿಯ ವೃತ್ತಿ ತೊರೆದವರು. ಚಿಪ್ಕೊ ಚಳವಳಿ ಮತ್ತಿತರ ಪರಿಸರ ವಿನಾಶ ವಿರುದ್ಧದ ನಾಗರಿಕ ಚಳವಳಿಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡಿರುವ ವಂದನಾ ಶಿವ ಅವರು ಈಗ ಡೆಹ್ರಾಡೂನ್‌ನಲ್ಲಿ ತಾವೇ ಸ್ಥಾಪಿಸಿರುವ ವಿಜ್ಞಾನ ಹಾಗೂ ಪರಿಸರ ಸಂಶೋಧನಾ ಪ್ರತಿಷ್ಠಾನದ ನಿರ್ದೇಶಕಿ ಆಗಿದ್ದಾರೆ.

ಪರಿಸರ-ಸ್ತ್ರೀವಾದಿಯಾದ ವಂದನಾ ಶಿವ ಅವರ ಪ್ರಕಾರ, ಅಭಿವೃದ್ಧಿ, ಪರಿಸರ ಹಾಗೂ ಲಿಂಗಭೇದ ಒಂದಕ್ಕೊಂದು ಸಂಬಂಧಿಸಿದ ಅಂಶಗಳು. ಸಮಕಾಲೀನ ಸಮಾಜದಲ್ಲಿ ಮಹಿಳೆಯ ಸ್ಥಾನಮಾನ ನಾಶ ಹಾಗೂ ಪರಿಸರ ವಿನಾಶಗಳ ಮಧ್ಯೆ ಅವಿನಾಭಾವ ಸಂಬಂಧವಿದೆ ಎಂಬುದು ಅದರ ನಿಲುವು.

ಈ ಚೌಕಟ್ಟಿನಲ್ಲಿ ಬರೆಯಲಾಗಿರುವ "ಸ್ಟೇಯಿಂಗ್ ಅಲೈವ್" ಕೃತಿ ಹಲವಾರು ಮಾಹಿತಿಗಳು, ಅಂಕಿ ಅಂಶಗಳನ್ನು ನೀಡುವುದರ ಜತೆಗೆ 'ಅಭಿವೃದ್ಧಿ' ಚಟುವಟಿಕೆಗಳ ಬಗ್ಗೆ ಹೊಸ ಒಳನೋಟಗಳನ್ನು ನೀಡುತ್ತದೆ.

---

ಮಹಿಳೆಯ ಪರಿಸ್ಥಿತಿ ಹಾಗೂ ಪರಿಸರ ವಿನಾಶಗಳಿಗೆ ಆರ್ಥಿಕ ಅಭಿವೃದ್ಧಿ ಎಂದು ಕರೆಯಲಾಗುವ "ತಪ್ಪು ತಿಳುವಳಿಕೆಯ ಅಭಿವೃದ್ಧಿ"ಗೆ (ಮಾಲ್ ಡೆವಲಪ್‌ಮೆಂಟ್) ಮಾರ್ಗದರ್ಶನ ಮಾಡುವ ಪರಿಕಲ್ಪನೆಗಳು ಕಾರಣ. ಈ ತಪ್ಪು ತಿಳುವಳಿಕೆಯ ಅಭಿವೃದ್ಧಿ – ಇದರ ಪರಿಣಾಮವಾಗಿ ಮೂಡುವ ವಿಜ್ಞಾನ, ತಂತ್ರಜ್ಞಾನ, ರಾಜಕೀಯ ವಿವರಣೆಗಳು ವಾಸ್ತವವಾಗಿ ಶೋಷಿಸುವಂತಹವು. ಇದರಿಂದ ಮಾರ್ಗದರ್ಶನ ಪಡೆಯುವ ಮಾನವೀಯ ಚಟುವಟಿಕೆಯ ಎಲ್ಲಾ ಕ್ಷೇತ್ರಗಳೂ ಮಹಿಳೆ ಮತ್ತು ಪ್ರಕೃತಿಯನ್ನು ಬದಿಗೆ ತಳ್ಳಿ ಭಾರವನ್ನು ಹೆಚ್ಚಿಸುತ್ತದೆ.

"ಪರಿಸರದ ಕಾಳಜಿಗಳನ್ನು ಸ್ತ್ರೀತ್ವದ ತತ್ವಗಳೊಡನೆ ಸಾವಯವ ಸಂಬಂಧ ಕಲ್ಪಿಸುವ ಪ್ರಯತ್ನ ಪುಸ್ತಕದ ಉದ್ದಕ್ಕೂ ಹರಡಿ ಕೊಂಡಿದೆ. ಇದು ಪರಿಸರ ಹಾಗೂ ಸ್ತ್ರೀವಾದಿ ಚಳುವಳಿಗಳ ಕ್ಷೇತ್ರಗಳನ್ನು ವಿಸ್ತೃತಗೊಳಿಸಿ ಈ ಎರಡೂ ಕ್ಷೇತ್ರಗಳಿಗೆ ಸಂಮಿಶ್ರ ಬೌದ್ಧಿಕ ಅರ್ಥಗಳನ್ನು ಕಲ್ಪಿಸಿವೆ" ಎಂದು ರಜನಿ ಕೊಠಾರಿ ಈ ಪುಸ್ತಕದ ಮುನ್ನುಡಿಯಲ್ಲಿ ಹೇಳಿದ್ದಾರೆ.

7 ಅಧ್ಯಾಯಗಳನ್ನು ಹೊಂದಿರುವ ಈ ಕೃತಿ ಆಫ್ರಿಕಾದ ಲೇಖಕ ಚಿನುವಾ ಅಚಿಬೆಯ ಮಾತುಗಳಿಂದ ಆರಂಭವಾಗುತ್ತದೆ. "ಅವರುಗಳು ಬರಲಿ, ಬದುಕುವುದು ಹೇಗೆಂದು ತಿಳಿದ, ಹೇಗೆ ಬದುಕಬೇಕೆಂಬುದನ್ನು ಇತರ ರಾಷ್ಟ್ರಗಳಿಗೆ ಕಲಿಸುವ ವ್ಯಕ್ತಿಗಳಿಂದ ಬದುಕಿನ ಸಂತೋಷ ಕಳೆದುಕೊಂಡಿಲ್ಲದ ಪುರುಷರು, ಮಹಿಳೆಯರು ಹಾಗೂ ಮಕ್ಕಳನ್ನು ಕಾಣಲಿ" (ನೋ ಲಾಂಗರ್ ಅಟ್ ಈಸ್ ಕೃತಿಯಿಂದ ಆಯ್ದ ಸಾಲುಗಳು).

ವಿಜ್ಞಾನ ಹಾಗೂ ಅಭಿವೃದ್ಧಿಯ ಪಾವಿತ್ರ್ಯ ಪ್ರಶ್ನಿ

ಸುವ ಹೊಸ ಅರಿವು ಬೆಳೆಯುತ್ತಿದೆ. ಇವು ಪ್ರಗತಿಯ ಸಾರ್ವಕಾಲಿಕ ಮಾನದಂಡಗಳಲ್ಲ. ಆದರೆ ಆಧುನಿಕ ಪಾಶ್ಚಿಮಾತ್ಯ ಪಿತೃಪ್ರಧಾನ ವ್ಯವಸ್ಥೆಯ ವಿಶೇಷ ಯೋಜನೆಗಳು ಎಂಬತ್ತರ ದಶಕದಲ್ಲಿ ಭಾರತದಲ್ಲಿ ಅಸ್ತಿತ್ವ ಉಳಿವಿಗಾಗಿಯೇ ನಡೆದ ಮಹಿಳಾ ಹೋರಾಟಗಳ ಜತೆಗಿನ ಪಾಲ್ಗೊಳ್ಳುವಿಕೆಯ ಅನುಭವದಿಂದ ಈ ಪುಸ್ತಕ ಮೂಡಿದೆ. ಬದುಕನ್ನು ಕಾಪಾಡಲು, ಸಂರಕ್ಷಿಸಲು ಹೋರಾಡುವವರ ಒಳನೋಟಗಳು, ನೋವುಗಳು ಮತ್ತು ಬದುಕನ್ನು ವಿನಾಶ ಮಾಡಿ ಉಳಿವಿಗೆ ಬೆದರಿಕೆ ಒಡ್ಡಿರುವ ಪ್ರಗತಿ, ವಿಜ್ಞಾನ ಹಾಗೂ ಅಭಿವೃದ್ಧಿಯ ಅರ್ಥವನ್ನು ಪ್ರಶ್ನಿಸುವವರ ಹೋರಾಟಗಳು ಈ ಪುಸ್ತಕಕ್ಕೆ ಮಾಹಿತಿಯ ನೆಲೆಗಳಾಗಿವೆ ಎಂದು ವಂದನಾ ಶಿವ ಪುಸ್ತಕದ 'ಪ್ರಸ್ತಾವನೆ' ಯಲ್ಲಿ ಹೇಳುತ್ತಾರೆ.

'ಪ್ರಕೃತಿಯ ಸಾವು', ಅಸ್ತಿತ್ವ-ಉಳಿವಿಗೆ ಬಂದಿರುವ ಬೆದರಿಕೆಗಳಲ್ಲಿ ಪ್ರಮುಖವಾದದ್ದು. ಭೂಮಿ ಕ್ಷಿಪ್ರ ಗತಿಯಲ್ಲಿ ಸಾಯುತ್ತಿದ. ವಸುಂಧರೆಯ ಕಾಡುಗಳು ಸಾಯುತ್ತಿವೆ. ಆಕೆಯ ಮಣ್ಣು ನಾಶವಾಗುತ್ತಿದೆ. ಆಕೆಯ ಜಲ ಬತ್ತುತ್ತಿದೆ. ಗಾಳಿ ಸಾಯುತ್ತಿದೆ. ವಿಶ್ವ ಹವಾಮಾನದ ಸೃಷ್ಟಿಕರ್ತರಾದ, ವಿಶ್ವ ಸಸ್ಯ ಸಂಪತ್ತಿನ ತೊಟ್ಟಿಲಾದ ಉಷ್ಣವಲಯದ ಕಾಡುಗಳನ್ನು ಬುಲ್‌ಡೋಜರ್ ಬಳಸಿ ಧ್ವಂಸ ಮಾಡಲಾಗುತ್ತಿದೆ, ಸುಡಲಾಗುತ್ತಿದೆ, ನಾಶ ಮಾಡಲಾಗುತ್ತಿದೆ. ಅಥವಾ ಮುಳುಗಿಸಲಾಗುತ್ತಿದೆ. 1950ರಲ್ಲಿ ಕೇವಲ ಸುಮಾರು 100 ದಶಲಕ್ಷ ಹೆಕ್ಟೇರ್ ಕಾಡುಗಳು ನಾಶವಾಗಿದ್ದವು. 1975 ರಲ್ಲಿ ಈ ಸಂಖ್ಯೆ ದ್ವಿಗುಣಗೊಂಡಿತು. 1950-75ರಲ್ಲಿ ಕನಿಷ್ಠ 120 ದಶಲಕ್ಷ ಹೆಕ್ಟೇರ್ ಉಷ್ಣವಲಯದ ಕಾಡುಗಳು ದಕ್ಷಿಣ ಹಾಗೂ ಆಗ್ನೇಯ ಏಷ್ಯಾ ಮಾತ್ರದಲ್ಲೇ ನಾಶವಾಗಿದೆ. ಈ ಶತಮಾನಾಂತ್ಯದಲ್ಲಿ ಇನ್ನೂ 270 ದಶಲಕ್ಷ ಹೆಕ್ಟೇರ್ ಕಾಡು ನಾಶವಾಗಲಿದೆ.

ಭಾರತದಲ್ಲಿ ಪ್ರತಿವರ್ಷ ವಾಣಿಜ್ಯ ಪ್ಲಾಂಟೇಷನ್ ಬೆಳೆಗಳಿಗಾಗಿ, ನದಿ ಕಣಿವೆ ಯೋಜನೆಗಳು, ಗಣಿ ಯೋಜನೆಗಳು ಇತ್ಯಾದಿಗಳಿಗಾಗಿ 1.3 ದಶಲಕ್ಷ ಹೆಕ್ಟೇರ್ ಕಾಡು ಕಳೆದುಕೊಳ್ಳುತ್ತಿದ್ದೇವೆ.

ಈಗಿನ ವಿನಾಶದ ಪ್ರಮಾಣದಲ್ಲಿ 2050 ವರ್ಷದೊಳಗೆ ಎಲ್ಲಾ ಉಷ್ಣವಲಯದ ಕಾಡುಗಳೂ ನಾಶವಾಗಲಿದೆ. ಇದರೊಂದಿಗೆ ಜೀವ ವೈವಿಧ್ಯ ಮಾಯವಾಗಲಿದೆ ಎಂದು ವಂದನಾ ಶಿವ ಎಚ್ಚರಿಸುತ್ತಾರೆ.

ಎಲ್ಲಾ ಜೀವಂತ ವಸ್ತುಗಳಲ್ಲಿ ಶೇಕಡಾ 50ರಷ್ಟು ಕನಿಷ್ಠ 5 ದಶಲಕ್ಷ ಜೀವ ಜಾತಿಗಳು ಉಷ್ಣವಲಯದ ಕಾಡುಗಳಲ್ಲಿ ಜೀವಿಸುತ್ತವೆ ಎಂಬ ಅಂದಾಜಿದೆ

ಕಾಡು, ಜಲ, ಭೂಮಿಯ ನಾಶದೊಂದಿಗೆ ಜೀವನ ಒತ್ತಾಸೆಯ ವ್ಯವಸ್ಥೆಯನ್ನು ನಾವು ಕಳೆದುಕೊಳ್ಳುತ್ತಿದ್ದೇವೆ. 'ಅಭಿವೃದ್ಧಿ' ಹಾಗೂ 'ಪ್ರಗತಿ'ಯ ಹೆಸರಲ್ಲಿ ವಿನಾಶ ನಡೆಯುತ್ತಿದೆ. ಆದರೆ ಉಳಿವಿಗೇ ಬೆದರಿಕೆ ಒಡ್ಡುವಂತಹ ಪ್ರಗತಿ ತತ್ವದಲ್ಲೇ ಏನೋ ತಪ್ಪಿದೆ. ಪ್ರಬಲವಾದ ಅಭಿವೃದ್ಧಿ ಮಾದರಿಗೆ ಅಂತರ್ಗತವಾಗಿರುವ ಪ್ರಕೃತಿಯ ವಿರುದ್ಧದ ಹಿಂಸಾಚಾರ, ತಮ್ಮ ತಮ್ಮ ಕುಟುಂಬ ಹಾಗೂ ಸಮಾಜದ ಜೀವನಾಧಾರವಾಗಿರುವ ಪ್ರಕೃತಿಯನ್ನೇ ಅವಲಂಬಿಸಿದ ಮಹಿಳೆಯರ ವಿರುದ್ಧದ ಹಿಂಸಾಚಾರಕ್ಕೆ ಸಂಬಂಧಿಸಿದೆ.

ಪ್ರಕೃತಿಯ ಜತೆಗೇ ಬೆಸೆದುಕೊಂಡಿರುವ ಗ್ರಾಮೀಣ ಭಾರತೀಯ ಮಹಿಳೆಯರು, ಪರಿಸರ ವಿನಾಶ ಹಾಗೂ ಅದರ ಕಾರಣಗಳನ್ನು ಹೇಗೆ ದೃಷ್ಟಿಸುತ್ತಾರೆ ಹಾಗೂ ಅನುಭವಿಸುತ್ತಾರೆ ಎಂಬುದಕ್ಕೆ ಧ್ವನಿ ಕೊಡುವುದು ಈ ಪುಸ್ತಕದ ಪ್ರಯತ್ನ ಎಂದು ವಂದನಾ ಶಿವ ಸ್ಪಷ್ಟಪಡಿಸುತ್ತಾರೆ.

ಆಧುನಿಕ ವಿಜ್ಞಾನ ಹಾಗೂ ಅಭಿವೃದ್ಧಿ ಚಾರಿತ್ರಿಕವಾಗಿ ಹಾಗೂ ಸೈದ್ಧಾಂತಿಕವಾಗಿ ಪುರುಷ ದೃಷ್ಟಿಕೋನದ ಪಾಶ್ಚಿಮಾತ್ಯ ಮೂಲದ ಯೋಜನೆಗಳಾಗಿವೆ. ಪ್ರಕೃತಿಯ ಪಿತೃಪ್ರಧಾನ ದೃಷ್ಟಿಕೋನದ ವಿಜ್ಞಾನ ಯುರೋಪಿನಲ್ಲಿ 15 ಹಾಗೂ 17ನೇ ಶತಮಾನಗಳಲ್ಲಿ ವೈಜ್ಞಾನಿಕ ಕ್ರಾಂತಿಯಾಗಿ ಹುಟ್ಟು ಪಡೆಯಿತು.

ಅಸ್ತಿತ್ವ ಹಾಗೂ ಉಳಿವನ್ನು ಸಾಧ್ಯವಾಗಿಸುವ ಕ್ರಿಯೆ ಹಾಗೂ ಆಲೋಚನಾ ವರ್ಗಗಳನ್ನು ತೃತೀಯ ಜಗತ್ತಿನ ಮಹಿಳೆಯರು ಸಂರಕ್ಷಿಸಿದ್ದಾರೆ. ಉಳಿವನ್ನು ಸಾಧ್ಯವಾಗಿಸುವ ಇವರಿಂದ ನ್ಯಾಯ ಹಾಗೂ ಶಾಂತಿ ಸಾಧ್ಯ. ಪ್ರಕೃತಿಯನ್ನು ನಾಶ ಮಾಡಿ ಇಡೀ ಸಂಸ್ಕೃತಿ ಹಾಗೂ ಸಮುದಾಯದ ಬದುಕಿಗೆ ಬೆದರಿಕೆ ಒಡ್ಡುತ್ತಿರುವ, ಅಭಿವೃದ್ಧಿ ಹಾಗೂ ಪ್ರಗತಿಯ ಹೆಸರಲ್ಲಿ ವಿಶ್ವವನ್ನು ಆಳುತ್ತಿ

ರುವ ಪಾಶ್ಚಿಮಾತ್ಯ ಪಿತೃಪ್ರಧಾನ ವ್ಯವಸ್ಥೆಯ ಪ್ರಧಾನ ವರ್ಗಗಳಿಗೆ ವಿರೋಧ ಹಾಗೂ ಸವಾಲಾಗಿ ಈ ವರ್ಗಗಳಿಂದ ಪರಿಸರ, ಮಹಿಳಾ ಹಾಗೂ ಶಾಂತಿ ಚಳವಳಿಗಳು ಸ್ಫೂರ್ತಿಯನ್ನು ಪಡೆಯಬಹುದು ಎಂದೂ ವಂದನಾ ಶಿವ ಅಭಿಪ್ರಾಯ ಪಟ್ಟಿದ್ದಾರೆ.

ಶಾಂತಿ ಹಾಗೂ ನ್ಯಾಯಯುತವಾದ ಬದುಕಿಗೆ ಹೋರಾಡುತ್ತಿರುವ ಭಾರತದ ಲಕ್ಷಾಂತರ ಅಗೋಚರ ಮಹಿಳೆಯರ ನಾಯಕತ್ವಕ್ಕೆ ಗೌರವ ಸಲ್ಲಿಸಲು ಈ ಪುಸ್ತಕ ಬರೆಯಲಾಗಿದೆ ಎಂದೂ ಅವರು ಹೇಳುತ್ತಾರೆ.

## ಅಧ್ಯಾಯ 1-ಅಭಿವೃದ್ಧಿ, ಪರಿಸರ ವಿಜ್ಞಾನ ಹಾಗೂ ಮಹಿಳೆ

ಅಭಿವೃದ್ಧಿ ಎನ್ನುವುದು ಪಾಶ್ಚಿಮಾತ್ಯ ಪಿತೃಪ್ರಧಾನ ವ್ಯವಸ್ಥೆಯ ಹೊಸ ಯೋಜನೆ ಎಂಬುದನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. 'ಅಭಿವೃದ್ಧಿ' ವಸಾಹತುಶಾಹಿ ನಂತರದ ಯೋಜನೆ. ಎಲ್ಲರಿಗೂ ಪಾಶ್ಚಿಮಾತ್ಯ ಶೈಲಿಯ ಪ್ರಗತಿ ಸಾಧ್ಯ ಎಂಬ ನಂಬಿಕೆ ಇದರ ಹಿನ್ನೆಲೆಯಲ್ಲಿದೆ. ಅಭಿವೃದ್ಧಿ ಸಾಧನೆಯ ಮಾರ್ಗ-ಮಹಿಳೆ, ಪ್ರಕೃತಿ, ಸಣ್ಣ ಸಣ್ಣ ಸಂಸ್ಕೃತಿಗೆ ವಿನಾಶಕಾರಿ ಆಗುವುದು ಅನಿವಾರ್ಯ. ಇದಕ್ಕಾಗಿಯೇ ವಿಶ್ವಾದ್ಯಂತ ಮಹಿಳೆಯರು, ರೈತರು ಹಾಗೂ ಆದಿವಾಸಿಗಳು ವಸಾಹತುಷಾಹಿಯಿಂದ ವಿಮೋಚನೆಗೆ ಹೋರಾಡಿದಂತೆ 'ಅಭಿವೃದ್ಧಿ'ಯಿಂದ ವಿಮೋಚನೆಗೆ ಹೋರಾಡುತ್ತಿದ್ದಾರೆ.

ಅಭಿವೃದ್ಧಿ ಪ್ರಕ್ರಿಯೆಯ ವಿಸ್ತರಣೆ ಹಾಗೂ ವಿಸ್ತೃತತೆಯಿಂದ ಮಹಿಳೆಯ ಆರ್ಥಿಕ ಸ್ಥಿತಿ ಸುಧಾರಣೆ ಆಗುತ್ತದೆ ಎಂಬ ನಂಬಿಕೆಯನ್ನು ವಿಶ್ವಸಂಸ್ಥೆಯ ಮಹಿಳಾ ದಶಕ ಅವಲಂಬಿಸಿತ್ತು. ಆದರೆ ದಶಕ ಅಂತ್ಯವಾಗುವ ವೇಳೆಗೆ ಅಭಿವೃದ್ಧಿಯೇ ಸಮಸ್ಯೆ ಎಂಬುದು ಸ್ಪಷ್ಟವಾಗತೊಡಗಿತ್ತು.

ಆರ್ಥಿಕ ಬೆಳವಣಿಗೆ ಎಂಬುದು ಹೊಸ ವಸಾಹತುಷಾಹಿ ಆಗಿತ್ತು. ಅಗತ್ಯವಿದ್ದವರಿಂದ ಸಂಪನ್ಮೂಲ ಬಸಿದುಕೊಳ್ಳುವ ಕ್ರಿಯೆ ಆಗಿತ್ತು.

ವಿಶ್ವಸಂಸ್ಥೆ ಮಹಿಳಾ ದಶಕದ ಅಂತ್ಯದಲ್ಲಿ ಮಹಿಳಾ ಕಾರ್ಯಕರ್ತರು, ಸಂಘಟಕರು ಹಾಗೂ ಸಂಶೋಧಕರು ರೂಪಿಸಿದ ಒಮ್ಮತದ ಪ್ರಬಂಧದಲ್ಲಿ ಈ ಅಭಿಪ್ರಾಯ ವ್ಯಕ್ತವಾಗಿತ್ತು.

"ಕೆಲವೊಂದು ಪ್ರಕರಣಗಳನ್ನು ಬಿಟ್ಟರೆ, ಆರ್ಥಿಕ ಸಂಪನ್ಮೂಲ, ಆದಾಯ ಹಾಗೂ ಉದ್ಯೋಗಕ್ಕೆ ಮಹಿಳೆಗಿದ್ದ ಅವಕಾಶಗಳ ಪ್ರಮಾಣ ಕಡಿಮೆಯಾಗಿದೆ. ಅವರ ಕೆಲಸದ ಹೊರೆ ಹೆಚ್ಚಾಗಿದೆ. ಅವರ ಆರೋಗ್ಯ, ಪೌಷ್ಟಿಕ ಆಹಾರ ಕ್ರಮ ಹಾಗೂ ಶೈಕ್ಷಣಿಕ ಸ್ಥಾನಮಾನ ಕುಸಿದಿದೆ ಎಂಬುದು ಒಂದು ದಶಕದ ಸಂಶೋಧನೆಯ ಬಹುತೇಕ ಒಮ್ಮತದ ನಿರ್ಧಾರವಾಗಿದೆ."

ಅಭಿವೃದ್ಧಿ ಯೋಜನೆಗಳು, ಭೂ, ಜಲ, ಕಾಡುಗಳನ್ನು ಮಹಿಳೆಯರ ಆಡಳಿತ ನಿಯಂತ್ರಣದಿಂದ ತಪ್ಪಿಸಿರುವುದಲ್ಲದೆ ಮಣ್ಣು, ನೀರು ಹಾಗೂ ಸಸ್ಯರಾಶಿಯ ಪರಿಸರ ವಿನಾಶದ ಮೂಲಕ ಪ್ರಕೃತಿಯ ಉತ್ಪಾದಕತೆ-ಪುನಶ್ಚೇತನ ಗುಣಕ್ಕೆ ಧಕ್ಕೆ ತರುವ ಮೂಲಕ ಮಹಿಳೆಯರ ಉತ್ಪಾದಕತೆಯನ್ನು ನಾಶ ಮಾಡಿವೆ.

ಲಿಂಗಭೇದ ಹಾಗೂ ಪಿತೃಪ್ರಧಾನ ವ್ಯವಸ್ಥೆ ದಮನದ ಹಳೆಯ ರೂಪವಾಗಿದ್ದರೆ ಅಭಿವೃದ್ಧಿ ಯೋಜನೆಗಳ ಮೂಲಕ ಇವು ಹೊಸ ಹಾಗೂ ಹೆಚ್ಚು ಹಿಂಸಾತ್ಮಕ ರೂಪಗಳನ್ನೂ ಪಡೆದುಕೊಂಡಿವೆ.

ಪಾರಂಪರಿಕ ನೈಸರ್ಗಿಕ ಸಹಜ ಸಮಾಜಗಳು 'ಅನುತ್ಪಾದಕ' ಎಂಬ ನಂಬಿಕೆ ಇಲ್ಲಿನದು. ಈ ದೃಷ್ಟಿಯ ಪ್ರಕಾರ ಸ್ಥಿರ ಹಾಗೂ ಸ್ವಚ್ಛ ನದಿ ಉತ್ಪಾದಕ ಸಂಪನ್ಮೂಲಗಳಲ್ಲ. ಅಣೆಕಟ್ಟುಗಳ 'ಮೂಲಕ ಇದರ ಅಭಿವೃದ್ಧಿ ಆಗಬೇಕು. ಕುಟುಂಬ ಹಾಗೂ ಸಮಾಜದ ಅಗತ್ಯಕ್ಕಾಗಿ 'ನದಿ' ಯನ್ನೂ ಮಹಿಳೆಯರು ಸಾಮೂಹಿಕ ಏಕಮೂಲವಾಗಿ ಹಂಚಿಕೊಂಡಲ್ಲಿ ಆ ಮಹಿಳೆಯರು ಉತ್ಪಾದಕ ಶ್ರಮದಲ್ಲಿ ಪಾಲ್ಗೊಂಡಂತಲ್ಲ. ಎಂಜಿನಿಯರಿಂಗ್ ಮನುಷ್ಯನ ಪ್ರವೇಶವಾದಲ್ಲಿ, ಆಗ ಜಲ ನಿರ್ವಹಣೆ ಹಾಗೂ ಜಲ ಬಳಕೆ ಉತ್ಪಾದಕ ಚಟುವಟಿಕೆಗಳಾಗುತ್ತವೆ. ಇದೇ ರೀತಿ ವಾಣಿಜ್ಯ ವಿಧದ ಏಕರೂಪ ಪ್ಲಾಂಟೇಷನ್‌ಗಳಾಗಿ ನೈಸರ್ಗಿಕ ಕಾಡುಗಳು ಅಭಿವೃದ್ಧಿ ಆಗುವವರೆಗೆ ಅವು ಅನುತ್ಪಾದಕವಾಗಿರುತ್ತವೆ, ಹೀಗಾಗಿ ಈ ಅಭಿವೃದ್ಧಿ ತಪ್ಪು ತಿಳುವಳಿಕೆಯ ಅಭಿವೃದ್ಧಿಗೆ ಸಮ. ಸ್ತ್ರೀಯಾತ್ಮಕತೆ (Feminine) ಸಂರಕ್ಷಣೆ ಹಾಗೂ ಪರಿಸರ ತತ್ವಕ್ಕೆ ಹೊರತಾದ ಅಭಿವೃದ್ಧಿ ಇದು.'

ಪ್ರಕೃತಿಯ ಪುನರುಜ್ಜೀವನ ಕ್ರಿಯೆ, ಮೂಲ ಅಗತ್ಯಗಳ ರೂಪದಲ್ಲಿ ಜೀವನ ಸಾತತ್ಯ ರೂಪಿಸುವ ಮಹಿಳೆಯ ಕ್ರಿಯೆಯ ನಿರ್ಲಕ್ಷ್ಯ 'ತಪ್ಪು ತಿಳಿವಳಿಕೆ ಅಭಿವೃದ್ಧಿ'ಯ ಮುಖ್ಯ ಅಂಶ. ಈ ಪ್ರಕಾರ, ಲಾಭ-ಬಂಡವಾಳ ಉತ್ಪಾದಿಸದ ಎಲ್ಲಾ ಕೆಲಸವೂ ಅನುತ್ಪಾದಕ ಕ್ರಿಯೆ.

ಮರಿಯಾ ಮೀಸ್ ಪ್ರಕಾರ (ಪ್ಯಾಟ್ರಿಯಾರ್ಕಿ ಆ್ಯಂಡ್ ಅಕ್ಯುಮುಲೇಷನ್ ಆನ್ ಎ ವರ್ಲ್ಡ್ ಸ್ಕೇಲ್, ಲಂಡನ್, ಝೆಡ್ ಬುಕ್ಸ್, 1986) ಹೆಚ್ಚು ಆದಾಯ ತತ್ವ ಪಿತೃಪ್ರಧಾನ ವ್ಯವಸ್ಥೆಯ ಪೂರ್ವಾಗ್ರಹವನ್ನು ಹೊಂದಿದೆ. ಸಮುದಾಯ ಅಗತ್ಯಗಳಿಗಿಂತ ಹೆಚ್ಚಿನ ಉತ್ಪಾದನೆ ಪ್ರಕೃತಿ ಹಾಗೂ ಮಹಿಳಾ ದೃಷ್ಟಿಗೆ ಆಧಾರವಾಗಿಲ್ಲ.

ತೃತೀಯ ಜಗತ್ತಿನ ಮಹಿಳೆಯರ ದೃಷ್ಟಿಯಲ್ಲಿ ಉತ್ಪಾದಕತೆ ಎಂಬುದು ಜೀವ ಉತ್ಪಾದನೆ ಹಾಗೂ ಪೋಷಣೆಯ ಕ್ರಮ.

ಈ ವಿಶ್ಲೇಷಣೆಯ ಪ್ರಕಾರ 'ತಪ್ಪು ತಿಳಿವಳಿಕೆಯ ಅಭಿವೃದ್ಧಿ'—ಗಂಡು ಹೆಣ್ಣಿನ ಅಸಮಾನತೆಯ ಹೊಸ ಮೂಲವೂ ಆಗುತ್ತದೆ. ಆಧುನೀಕತೆ, ದಬ್ಬಾಳಿಕೆಯ ಹೊಸ ರೂಪಗಳ ಆವಿಷ್ಕಾರಕ್ಕೆ ಕಾರಣವಾಗಿದೆ.

ಈ ಸಂದರ್ಭದಲ್ಲಿ ಮಹಾತ್ಮಾಗಾಂಧಿ ಅವರ ಮಾತುಗಳನ್ನೂ ವಂದನಾಶಿವ ಉಲ್ಲೇಖಿಸುತ್ತಾರೆ.

"ಎಲ್ಲರ ಅಗತ್ಯ ಪೂರೈಕೆಗೆ ಸಾಕಾಗುವಷ್ಟು ವಿಶ್ವದಲ್ಲಿ ಇದೆ. ಆದರೆ ಕೆಲವರ ದುರಾಸೆಗೆ ಇದು ಸಾಕಾಗುವುದಿಲ್ಲ."

ತಪ್ಪು ತಿಳುವಳಿಕೆಯ ಅಭಿವೃದ್ಧಿ ಎಂಬುದು ಆಲೋಚನೆ-ಕ್ರಿಯೆಯ ತಪ್ಪು ತಿಳುವಳಿಕೆಯ ಅಭಿವೃದ್ಧಿ. ಆಚರಣೆಯಲ್ಲಿ ಈ ಚೂರು-ಚೂರಾದ, ಕ್ಷೀಣಿಸಿದ ವ್ಯಾಪ್ತಿಯ, ದ್ವಂದ್ವ ದೃಷ್ಟಿಕೋನ ಪ್ರಕೃತಿಯಲ್ಲಿ ಮಾನವನ ಸಮಗ್ರತೆ ಹಾಗೂ ಸೌಹಾರ್ದತೆಯನ್ನೂ ಅಲ್ಲದೆ ಪುರುಷ-ಮಹಿಳೆಯರ ಮಧ್ಯದ ಸೌಹಾರ್ದತೆಯನ್ನೂ ಉಲ್ಲಂಘಿಸುತ್ತದೆ.

ಬದುಕಿನ ಸೃಷ್ಟಿ ಹಾಗೂ ಪೋಷಣೆಯ ಪ್ರತೀಕಗಳಾದ ಪ್ರಕೃತಿ ಹಾಗೂ ಮಹಿಳೆಯರನ್ನೂ "ಸಂಪನ್ಮೂಲ"ಗಳ ಮಟ್ಟಕ್ಕೆ ಇಳಿಸಲಾಗುತ್ತದೆ.

'ತಪ್ಪು ತಿಳಿವಳಿಕೆಯ ಅಭಿವೃದ್ಧಿ'ಯನ್ನೂ ಸಾಮಾನ್ಯವಾಗಿ ಆರ್ಥಿಕ ಬೆಳವಣಿಗೆ ಎಂದು ಕರೆಯಲಾಗುತ್ತದೆ. ಇದನ್ನು ಒಟ್ಟು ರಾಷ್ಟ್ರೀಯ ಉತ್ಪನ್ನದ ಮೂಲಕ ಅಳೆಯಲಾಗುವುದು.

**ಅಧ್ಯಾಯ 2 :**
**ವಿಜ್ಞಾನ, ಪ್ರಕೃತಿ, ಹಾಗೂ ಲಿಂಗವ್ಯವಸ್ಥೆ**

'ಅಭಿವೃದ್ಧಿ' ಮಾತ್ರ ಮಹಿಳೆ ಹಾಗೂ ಪ್ರಕೃತಿ ವಿರುದ್ಧದ ಹಿಂಸಾಚಾರದ ಮೂಲವಾಗಿಲ್ಲ. ಆಳವಾದ ವಿಶ್ಲೇಷಣೆಯಲ್ಲಿ, ಅಭಿವೃದ್ಧಿಗೆ ಆಧಾರವಾದ ವೈಜ್ಞಾನಿಕ ಜ್ಞಾನವೇ ಹಿಂಸಾಚಾರದ ಮೂಲವಾಗಿರುತ್ತದೆ ಎಂಬುದನ್ನು ಈ ಅಧ್ಯಾಯ ವಿಶ್ಲೇಷಿಸುತ್ತದೆ.

ಆಧುನಿಕ ವಿಜ್ಞಾನ ಪ್ರಜ್ಞಾಪೂರ್ವಕವಾಗಿ ಲಿಂಗ ವ್ಯವಸ್ಥೆಗೆ ಒಳಪಟ್ಟ ಪಿತೃಪ್ರಧಾನ ಚಟುವಟಿಕೆ ಎಂದು ವಂದನಾ ಶಿವ ಕರೆಯುತ್ತಾರೆ. ವಿಜ್ಞಾನದ ಸಿದ್ಧಾಂತ ಒಂದೆಡೆ ಪ್ರಕೃತಿ ಬೋಳಾಗುವಿಕೆಗೆ ಮಂಜೂರು ಮಾಡಿದ್ದರೆ, ಮತ್ತೊಂದೆಡೆ ಮಹಿಳೆಯ ಅವಲಂಬನೆ ಹಾಗೂ ಪುರುಷರ ಅಧಿಕಾರವನ್ನು ನ್ಯಾಯಬದ್ಧಗೊಳಿಸಿದೆ.

ವಿಜ್ಞಾನ ಹಾಗೂ ಪುರುಷತ್ವ, ಪ್ರಕೃತಿ ಹಾಗೂ ಹೆಣ್ಣಿನ ಮೇಲಿನ ಪ್ರಾಬಲ್ಯ ಗಳಿಕೆಗೆ ಸಂಬಂಧಿಸಿದೆ. ಈ ದಿಸೆಯಲ್ಲಿ ವಿಜ್ಞಾನ ಹಾಗೂ ಲಿಂಗ ಸಿದ್ಧಾಂತ ಪರಸ್ಪರ ಪೂರಕವಾಗಿದೆ.

ಇಂದು ಹೊಸ ಪರಿಸರ ಅರಿವಿನೊಂದಿಗೆ, ಪ್ರಕೃತಿಯ ಜತೆ ಸೌಹಾರ್ದದಿಂದ ಬದುಕುವುದು ಹೇಗೆ ಎಂಬುದನ್ನು ಕಲಿಯುವುದಕ್ಕಾಗಿ ವಿಶ್ವಾದ್ಯಂತ ಪರಿಸರ ತಜ್ಞರು ನೇಟಿವ್ ಅಮೆರಿಕನ್ ಮತ್ತಿತರ ಮೂಲ ನಿವಾಸಿ ಜನಾಂಗದ ನಂಬಿಕೆಗಳನ್ನು ಕಲಿಕೆಯ ವಿಶೇಷ ಮೂಲವಾಗಿಸಿಕೊಂಡಿದ್ದಾರೆ.

ಪರಿಸರ ಚಳವಳಿಗೆ ಮುಖ್ಯ ಸ್ಫೂರ್ತಿ ಆಗಿರುವ ಚೀಫ್ ಸೀಟಲ್ ಪತ್ರ ಈ ಅಂಶ ತಿಳಿಸುತ್ತದೆ —

"ಇದು ನಮಗೆ ಗೊತ್ತಿದೆ. ಈ ಭೂಮಿ ಮಾನವನಿಗೆ

ಸೇರಿದ್ದಲ್ಲ. ಮಾನವ ಭೂಮಿಗೆ ಸೇರುತ್ತಾನೆ. ಎಲ್ಲಾ ವಸ್ತುಗಳೂ ಕುಟುಂಬವನ್ನು ಬೆಸೆಯುವ ರಕ್ತದ ರೀತಿ ಬೆಸೆದುಕೊಂಡಿವೆ. ಭೂಮಿಗೆ ಯಾವುದೇ ವಿಪತ್ತು ಒದಗಿದರೂ ಭೂಮಿಯ ಮಕ್ಕಳ ಮೇಲೆ ಬೀಳುತ್ತದೆ. ಮಾನವ ಜೀವ ಜಾಲವನ್ನು ನೇಯಲಿಲ್ಲ. ಆತ ಕೇವಲ ಒಂದು ಎಳೆ. ಆ ಎಳೆಗೆ ಆತ ಏನೇ ಮಾಡಿದರೂ ತನಗೇ ಮಾಡಿಕೊಂಡಂತೆ".

ಪಾಶ್ಚಿಮಾತ್ಯ ತಜ್ಞರಿಂದಾದ ಆಫ್ರಿಕಾದ 'ಅಭಿವೃದ್ಧಿ' ಆಫ್ರಿಕಾ ವಿನಾಶಕ್ಕೆ ಮುಖ್ಯ ಕಾರಣ. ಬಹು ರಾಷ್ಟ್ರೀಯ ಬ್ಯಾಂಕ್‌ಗಳು ಹಾಗೂ ಕಾರ್ಪೊರೇಷನ್‌ಗಳಿಂದಾದ ಬ್ರೆಜಿಲ್‌ನ 'ಅಭಿವೃದ್ಧಿ', ಅಮೆಝಾನಿಯನ್ ಮಳೆ ಕಾಡುಗಳ ಸಮೃದ್ಧಿ ವಿನಾಶಕ್ಕೆ ಕಾರಣ. ಆಫ್ರಿಕಾ ಹಾಗೂ ಅಮೆಝಾನಿಯಾ ಮೂಲ ನಿವಾಸಿಗಳು ಶತಮಾನಗಳ ಅನುಭವದಲ್ಲಿ ರೂಪಿಸಿಕೊಂಡ ಪರಿಸರ ಸ್ನೇಹಿ ದೇಶಿ ಜ್ಞಾನ ವ್ಯವಸ್ಥೆ ಇದ್ದು; ಇತಿಹಾಸದುದ್ದಕ್ಕೂ ಸ್ಥಳೀಯ ಜನರು ಸುರಕ್ಷಿಸಿಕೊಂಡ ಇಂತಹ ಜ್ಞಾನವನ್ನು ಪಾಶ್ಚಿಮಾತ್ಯ ತಜ್ಞರು ಹಾಗೂ ಪಾಶ್ಚಿಮಾತ್ಯ ಜ್ಞಾನ ಹಾಳುಗೆಡವಲು ಕೆಲವೇ ದಶಕಗಳು ಅಥವಾ ವರ್ಷಗಳು ಸಾಕು.

ಈ ಬಗೆಯ ಪರಿಸರ ಹಾಗೂ ಜ್ಞಾನ – ತಿಳಿವಳಿಕೆ ವ್ಯವಸ್ಥೆಯ ನಾಶವನ್ನು ಜ್ಞಾನಮಟ್ಟ ಇಳಿಸುವುದರ (Reductionism) ಹಿಂಸಾಚಾರ ಎಂದು ವಂದನಾ ಶಿವ ಗುರುತಿಸುತ್ತಾರೆ, (1) ಮಹಿಳೆಯ ವಿರುದ್ಧದ ಹಿಂಸಾಚಾರ 2) ಪ್ರಕೃತಿ ವಿರುದ್ಧದ ಹಿಂಸಾಚಾರ 3) ಜ್ಞಾನದ ವಿರುದ್ಧದ ಹಿಂಸಾಚಾರವೆಂದು ಅವರು ಪಟ್ಟಿ ಮಾಡುತ್ತಾರೆ.

ಸಮಕಾಲೀನ ಮಹಿಳಾ ಪರಿಸರ ಹೋರಾಟಗಳು, 'ನಿಶ್ಚಲತೆ ಮತ್ತು ಸ್ಥಿರತೆ' ಸ್ಥಗಿತತೆಯ ಪ್ರತೀಕವಲ್ಲ ಎಂಬುದನ್ನು ಸ್ಥಾಪಿಸುವ ಹೊಸ ಯತ್ನಗಳಾಗಿವೆ. ಪ್ರಕೃತಿಯ ಅಗತ್ಯ, ಪರಿಸರ ಪ್ರಕ್ರಿಯೆಗಳ ಜತೆಗಿನ ಸಮತೋಲನ ತಾಂತ್ರಿಕ ಹಿಂದುಳಿದಿರುವಿಕೆಯಲ್ಲ. ತಾಂತ್ರಿಕ ಸೂಕ್ಷ್ಮತೆಯ ಪ್ರತೀಕ ಎಂದು ವಂದನಾ ಪ್ರತಿಪಾದಿಸುತ್ತಾರೆ.

ಪರಿಸರ ಚಳುವಳಿಗಳು ಅಹಿಂಸಾತ್ಮಕ ವಿಶ್ವ ವ್ಯವಸ್ಥೆಗಾಗಿ ನಡೆಯುವ ರಾಜಕೀಯ ಚಳವಳಿಗಳು, ಉಳಿವಿಗಾಗಿ, ಆಯ್ಕೆಗಳನ್ನು ಸಂರಕ್ಷಿಸಿಕೊಳ್ಳುವುದಕ್ಕಾಗಿ ಪ್ರಕೃತಿ ಸಂರಕ್ಷಣೆ ಇದರ ಗುರಿ. ಈ ಚಳವಳಿಗಳು ಸಣ್ಣ ಪ್ರಮಾಣದಲ್ಲಿವೆ. ಆದರೆ ಇವು ಬೆಳೆಯುತ್ತಿವೆ. ಇವು ಸ್ಥಳೀಯ ಚಳವಳಿಗಳು. ಆದರೆ ಈ ಚಳವಳಿಗಳಿಂದಾದ,ಉಂಟಾಗುವ ಸ್ಥಳೀಯೇತರ ಪರಿಣಾಮಗಳಲ್ಲಿ ಇದರ ಯಸಸ್ಸು ಅಡಗಿದೆ. ಉಳಿವಿನ ಹಕ್ಕಿಗೆ ಇವು ಒತ್ತಾಯಿಸುತ್ತದೆ. ಆದರೆ ಈ ಕನಿಷ್ಠ ಬೇಡಿಕೆ ಜತೆಗೆ ಶಾಂತಿಯುತ ಹಾಗೂ ನ್ಯಾಯಯುತ ವಿಶ್ವದಲ್ಲಿ ಬದುಕುವ ಬೇಡಿಕೆಯೂ ಅಂಟಿಕೊಂಡಿದೆ. ಈ ಬುಡಮಟ್ಟದ ಚಳವಳಿಗಳ ಯಶಸ್ಸಿನ ಜತೆಗೇ ಉಳಿವಿನ ಜಾಗತಿಕ ವಿವಾದವೂ ಸಂಬಂಧಿಸಿದೆ. ವಿಶ್ವದೃಷ್ಟಿಕೋನ ಹಾಗೂ ಜೀವನಶೈಲಿ ಮಟ್ಟದಲ್ಲಿ ಪರಿಸರಾತ್ಮಕವಾಗಿ ವಿಶ್ವವನ್ನು ಪುನರ್‌ರಚಿಸದಿದ್ದಲ್ಲಿ ಶಾಂತಿ ಹಾಗೂ ನ್ಯಾಯದ ಉಲ್ಲಂಘನೆ ಮುಂದುವರಿಯುತ್ತದೆ. ಇದು ಅಂತಿಮವಾಗಿ ಮಾನವನ ಉಳಿವಿಗೇ ಬೆದರಿಕೆಯಾಗಲಿದೆ.

## ಅಧ್ಯಾಯ 3

## ಪ್ರಕೃತಿಯಲ್ಲಿ ಮಹಿಳೆ

ಭಾರತದಲ್ಲಿ ಮಹಿಳೆಯರು ಪರಿಕಲ್ಪನೆ ಹಾಗೂ ಆಚರಣೆಯಲ್ಲಿ ಪ್ರಕೃತಿಯ ಒಂದು ಭಾಗ. ಒಂದು ಮಟ್ಟದಲ್ಲಿ ಪ್ರಕೃತಿಯನ್ನು ಹೆಣ್ತನ ತತ್ವದ ಸಾಕಾರ ರೂಪವಾಗಿ ಸಂಕೇತಿಸಲಾಗುತ್ತದೆ. ಮತ್ತೊಂದು ಮಟ್ಟದಲ್ಲಿ ಜೀವ ಉತ್ಪಾದಿಸಿ, ಜೀವನಾಧಾರ ಒದಗಿಸುವ ಸ್ತ್ರೀಯಾತ್ಮಕ ಕಲ್ಪನೆಯಲ್ಲಿ ಪೋಷಿಸಲಾಗುತ್ತದೆ.

ಭಾರತೀಯ ಬ್ರಹ್ಮಾಂಡ ಶಾಸ್ತ್ರದ ಪ್ರಕಾರ, ಸೃಷ್ಟಿ-ವಿನಾಶದ ಕ್ರಿಯೆಯಲ್ಲಿ ವಿಶ್ವ ಸೃಷ್ಟಿಯಾಗಿ ಪುನಶ್ಚೇತನಗೊಳ್ಳುತ್ತದೆ. ಎರಡು ವಿರುದ್ಧ ಶಕ್ತಿಗಳ ಮಧ್ಯದ ಕರ್ಷಣ ಎಳೆತದಿಂದ ಹುಟ್ಟುವ ಚಲನೆ—ಕ್ರಿಯೆಯನ್ನು 'ಶಕ್ತಿ'ಯಾಗಿ ಚಿತ್ರಿಸಲಾಗುತ್ತದೆ. ಎಲ್ಲಾ ಅಸ್ತಿತ್ವವೂ ಈ 'ಶಕ್ತಿ'ಯಿಂದ ಉದಯಿಸುತ್ತದೆ. ಈ ಅಧಿಕಾರ, ಈ ಶಕ್ತಿಯ ರೂಪ 'ಪ್ರಕೃತಿ'. ಹೀಗಾಗಿ ಜೀವ ಇರುವ ಹಾಗೂ ಜಡವಾದ ಪ್ರಕೃತಿ-ಶಕ್ತಿಯ ಅಭಿವ್ಯಕ್ತಿ. ಬ್ರಹ್ಮಾಂಡ ಸ್ತ್ರೀಯಾತ್ಮಕ ಹಾಗೂ ಸೃಜಶೀಲ ತತ್ವವನ್ನು ಇದು ಬಿಂಬಿಸುತ್ತದೆ. ಪುರುಷ ತತ್ವದ ಜತೆಗೆ ಪ್ರಕೃತಿ ವಿಶ್ವವನ್ನು ಸೃಷ್ಟಿಸುತ್ತದೆ.

ಪ್ರಕೃತಿಯನ್ನು ಸಮೃದ್ಧಿಯ ಮೂಲವಾಗಿ ಅದಿತಿ

ಯಾಗಿ, ಆದಿಶಕ್ತಿಯಾಗಿ ಪೂಜಿಸಲಾಗುತ್ತದೆ. ಪ್ರಕೃತಿಯ ಸ್ವಭಾವ ಚಟುವಟಿಕೆ ಹಾಗೂ ವೈವಿಧ್ಯತೆ.

ಮಹಿಳೆ ಹಾಗೂ ಪ್ರಕೃತಿಯ ಬೆಸುಗೆ ಆತ್ಮೀಯತೆಯದ್ದು ಎಂದು ಹೇಳಿದಲ್ಲಿ ಅದು ಯಾವುದೇ ರೀತಿ ಕ್ರಾಂತಿಕಾರಕವಾದದ್ದಲ್ಲ, ಇಂತಹ ಒಂದು ಅಭಿಪ್ರಾಯವೇ ಮಹಿಳೆ ಹಾಗೂ ಪ್ರಕೃತಿಯ ಪ್ರಾಬಲ್ಯಕ್ಕೆ ಅವಕಾಶ ನೀಡಿದ್ದು. ತೃತೀಯ ಜಗತ್ತಿನಲ್ಲಿ ಗ್ರಾಮೀಣ ಮಹಿಳೆಯರು ನೀಡಿರುವ ಹೊಸ ಒಳನೋಟದ ಪ್ರಕಾರ, ಪ್ರಕೃತಿಯ ಜತೆ ಮಹಿಳೆಯ ಸಂಬಂಧ ಜಡತೆಯಿಂದ ಕೂಡಿದ್ದಲ್ಲ. ಅದು ಸೃಜನಶೀಲತೆ ಹಾಗೂ ಬದುಕಿನ ಕಾಪಾಡುವಿಕೆ ಪ್ರಕ್ರಿಯೆಯಲ್ಲಿ ಬೆಸೆದುಕೊಂಡಿದೆ.

ತೃತೀಯ ಜಗತ್ತಿನಲ್ಲಿ ಮಹಿಳೆ ಹಾಗೂ ಪರಿಸರ ಕುರಿತು ಬಹಳಷ್ಟು ಕೃತಿಗಳು ಪರಿಸರ ವಿನಾಶದ ವಿಶೇಷ ಬಲಿಪಶುಗಳಂತೆ ಮಹಿಳೆಯರನ್ನು ಚಿತ್ರಿಸಿವೆ. ಆದರೆ ಭಾರತದಂತಹ ರಾಷ್ಟ್ರಗಳಲ್ಲಿ ಪ್ರಮುಖ ಪರಿಸರ ಚಳವಳಿಗಳಲ್ಲಿ ಪಾಲ್ಗೊಳ್ಳುತ್ತಿರುವ ಮಹಿಳೆಯರು ಬಲಿಪಶುಗಳಾಗಿ ಮಾತ್ರ ಮಾತನಾಡುತ್ತಿಲ್ಲ, ಅವರ ಧ್ವನಿಗಳು ವಿಮೋಚನೆಯ ಮತ್ತು ಪರಿವರ್ತನೆಯ ಧ್ವನಿಗಳು. ಆಲೋಚನೆಯ ಹೊಸ ಕ್ರಮ ಹಾಗೂ ಹೊಸ ದಿಕ್ಕುಗಳನ್ನು ಒದಗಿಸುವಂತಹವು.

ಪಿತೃಪ್ರಧಾನವಾದ ಅಭಿವೃದ್ಧಿಗೆ ಮೂಲಭೂತವಾಗಿ ವಿರೋಧಿಯಾದ ಕ್ರಮಗಳನ್ನು ಮಹಿಳಾ ಹಾಗೂ ಪರಿಸರ ಚಳುವಳಿಗಳು ಸೂಚಿಸುತ್ತವೆ. ಮನುಕುಲದ ಉಳಿವಿಗೆ 'ಬೇಟೆಗಾರ' ಗಂಡಿಗಿಂತ 'ಸಂಗ್ರಹಗಾರ್ತಿ' ಹೆಣ್ಣಿನ ಕೊಡುಗೆ ಅಪಾರ ಎಂದು ವಂದನಾ ಶಿವ ವಿಶ್ಲೇಷಿಸುತ್ತಾರೆ.

ಪಿತೃಪ್ರಧಾನ ಮಾದರಿ ಬೇಟೆಗಾರ ಪುರುಷನನ್ನು ಮಾನವ ಉತ್ಪಾದಕತೆಗೆ ಮಾದರಿಯಾಗಿಸುತ್ತದೆ. ಆತ "ಮೂಲಭೂತವಾಗಿ ಪರಾವಲಂಬಜೀವಿ–ಉತ್ಪಾದಕನಲ್ಲ" ಎಂದು ಮರಿಯಾಮಿಸ್ ಹೇಳುತ್ತಾರೆ. ಈ ಹಿನ್ನೆಲೆಯಲ್ಲಿ ಹೆಣ್ತನವನ್ನು ಪುರುಷೀಕರಣಗೊಳಿಸುವ ಕ್ರಿಯೆ ವಿಮೋಚನೆಗೆ ಇರುವ ಆಯ್ಕೆಯಲ್ಲ ಎಂದು ಪ್ರತಿಪಾದಿಸಲಾಗುತ್ತದೆ.

**ಅಧ್ಯಾಯ–4 ಕಾಡಿನಲ್ಲಿ ಮಹಿಳೆ**

ಭಾರತೀಯ ನಾಗರೀಕತೆಯಲ್ಲಿ ಕಾಡಿನ ಪಾತ್ರ ಪ್ರಧಾನವಾದುದು. ಕಾಡುಗಳನ್ನು ಅರಣ್ಯಾನಿ, ವನದೇವತೆ, ಜೀವ ಹಾಗೂ ಫಲವತ್ತತೆಯ ಮೂಲವಾಗಿ ಪೂಜಿಸಲಾಗುತ್ತದೆ. ಅಲ್ಲದೆ ಸಮುದಾಯವಾಗಿ ಅರಣ್ಯವನ್ನೂ ಸಾಮಾಜಿಕ ಹಾಗೂ ನಾಗರೀಕತೆಯ ವಿಕಾಸದ ಮಾದರಿಯಾಗಿಯೂ ಕಾಣಲಾಗುತ್ತದೆ. ಕಾಡಿನ ವೈವಿಧ್ಯತೆ, ಸೌಹಾರ್ದತೆ ಹಾಗೂ ಸ್ವಯಂ ಪೋಷಣೆಯ ಪ್ರಕೃತಿ ಭಾರತೀಯ ನಾಗರೀಕತೆಗೆ ಮಾರ್ಗದರ್ಶನ ಮಾಡುವ ಸಂಘಟನೆಯ ತತ್ವಗಳಾದವು. ಅರಣ್ಯ ಸಂಸ್ಕೃತಿ ಆದಿಕಾಲದ ಪರಿಸ್ಥಿತಿಯಲ್ಲ, ಪ್ರಜ್ಞಾಪೂರ್ವಕ ಆಯ್ಕೆಯ ವಿಚಾರ ಇದು.

ರವೀಂದ್ರನಾಥ್ ಟಾಗೋರ್ ಅವರ ಪ್ರಕಾರ, ಭಾರತೀಯ ಸಂಸ್ಕೃತಿಯ ವಿಶಿಷ್ಟತೆ ಇರುವುದು ಕಾಡಿನ ಬದುಕನ್ನು ಸಾಂಸ್ಕೃತಿಕ ವಿಕಾಸದ ಉನ್ನತ ರೂಪವಾಗಿ ಚಿತ್ರಿಸಿರುವುದರಲ್ಲಿ. 'ತಪೋವನ'ದಲ್ಲಿ ಅವರು ಬರೆಯುತ್ತಾರೆ,

"ಸಮಕಾಲೀನ ಪಾಶ್ಚಿಮಾತ್ಯ ನಾಗರೀಕತೆಯನ್ನು ಇಟ್ಟಿಗೆ ಮಣ್ಣಿನಿಂದ ನಿರ್ಮಿಸಲಾಗಿದೆ. ಇದು ನಗರದಲ್ಲಿ ಬೇರೂರಿದೆ. ಆದರೆ ಭಾರತೀಯ ನಾಗರೀಕತೆ ತನ್ನ ಪುನರ್‌ಸೃಷ್ಟಿ, ಲೌಕಿಕ ಹಾಗೂ ಬೌದ್ಧಿಕತೆಯ ಮೂಲವನ್ನು ಕಂಡುಕೊಂಡಿರುವುದು ಕಾಡಿನಲ್ಲಿ, ನಗರದಲ್ಲಲ್ಲ. ಭಾರತದ ಉತ್ತಮ ವಿಚಾರಗಳು, ಜನಜಂಗುಳಿಯಿಂದ ದೂರವಾಗಿ ಮರ, ನದಿ, ಕೆರೆ ಜತೆಗಿನ ಸಂಪರ್ಕದಲ್ಲಿ ಉದಯಿಸಿದೆ. ಅರಣ್ಯದ ಶಾಂತಿ, ಮಾನವನ ಬೌದ್ಧಿಕ ವಿಕಾಸಕ್ಕೆ ನೆರವಾಗಿದೆ."

ಜಾನಪದ ಹಾಗೂ ಮೂಲ ನಿವಾಸಿಗಳ ಸಂಸ್ಕೃತಿಗಳಲ್ಲಿ ಮರ ಹಾಗೂ ಕಾಡುಗಳನ್ನು ವನದೇವತೆ ಅಥವಾ ಅರಣ್ಯದೇವತೆಗಳಾಗಿ ಪೂಜಿಸಲಾಗುತ್ತದೆ.

ಬ್ರಿಟಿಷರು ಭಾರತವನ್ನು ವಸಾಹತುಷಾಹಿ ಆಡಳಿತಕ್ಕೆ ಒಳಪಡಿಸಿದ ನಂತರ, ಅವರು ಮೊದಲು ಭಾರತದ ಕಾಡುಗಳನ್ನು ವಸಾಹತು ಆಡಳಿತಕ್ಕೆ ಒಳಪಡಿಸಿದರು. ಕಾಡಿನ ಸಂಪತ್ತು, ಅದನ್ನು ಕಾಪಾಡುವ ಸ್ಥಳೀಯ ಜನರಿಗಿರುವ ಜ್ಞಾನ ಸಂಪತ್ತು ಅರಿವಿಲ್ಲದ ಬ್ರಿಟೀಷರು ಈ ಜೀವನಾಡಿಯನ್ನು 'ಟಿಂಬರ್‌ಗಣಿ'ಯ ಮಟ್ಟಕ್ಕೆ

ಇಳಿಸಿದರು. ಕಾಡನ್ನು ಆಧರಿಸಿದ ಮಹಿಳೆಯ ಜೀವನಾಧಾರದ ಅರ್ಥ ವ್ಯವಸ್ಥೆ ಸ್ಥಾನದಲ್ಲಿ ಬ್ರಿಟೀಷ್ ವಸಾಹತುಷಾಹಿಯ ವಾಣಿಜ್ಯ ಅರ್ಥವ್ಯವಸ್ಥೆ ರೂಪುಗೊಂಡಿತು. ಮಲಬಾರ್‌ದ ತೇಗವನ್ನು ಅರಸನ ನೌಕಾಪಡೆಗೆ ಬಳಸಲಾಯಿತು. ಮಧ್ಯ ಪ್ರದೇಶದ 'ಸಲ್' ಹಾಗೂ ಹಿಮಾಲಯದ 'ಕೊನಿಫೆರ್' ಮರಗಳನ್ನು ರೈಲ್ವೆ ವ್ಯವಸ್ಥೆಗೆ ಬಳಸಲಾಯಿತು. ಕಾಡು ವಿನಾಶಕ್ಕೆ ಸ್ಥಳೀಯ ಜನರನ್ನು ಯಾವಾಗಲೂ ಹೊಣೆ ಮಾಡುವುದು ಸಾಮಾನ್ಯವಾದರೂ ಸಾಮಾನ್ಯವಾಗಿ ವಾಣಿಜ್ಯ ಬೇಡಿಕೆಗಳೇ ವ್ಯಾಪಕ ಅರಣ್ಯನಾಶಕ್ಕೆ ಕಾರಣವಾಗಿದೆ. ಹಿಮಾಲಯ ಪ್ರದೇಶದಲ್ಲಿ ಸ್ಥಳೀಯ ಜನರಿಗಿಂತ ಸಾಮ್ರಾಜ್ಯದ ಅಗತ್ಯಗಳೇ ಕ್ಷಿಪ್ರಗತಿಯ ಕಾಡು ನಾಶಕ್ಕೆ ಕಾರಣವಾಯಿತು ಎಂಬುದಕ್ಕೆ ಸಾಕ್ಷಿಗಳಿವೆ.

ಬ್ರಿಟಿಷ್ ವಾಣಿಜ್ಯ ಹಿತಾಸಕ್ತಿಗಳಿಂದ ಅರ್ಧ ಶತಮಾನದಷ್ಟು ದೀರ್ಘ ಕಾಲದ ಕಾಡು ವಿನಾಶದ ನಂತರವಷ್ಟೇ ಈ ವಿನಾಶ ನಿಯಂತ್ರಣದ ಪ್ರಯತ್ನ ಮಾಡಲಾಯಿತು. 1865ರಲ್ಲಿ ಮೊದಲ ಭಾರತೀಯ ಅರಣ್ಯ 'ಕಾಯಿದೆ'ಯನ್ನೂ ಜಾರಿಗೊಳಿಸಲಾಯಿತು. ಈ ಪ್ರಕಾರ, ಕಾಡು ಹಾಗೂ ಬಂಜರು ಭೂಮಿಗಳನ್ನು ಮೀಸಲು ಕಾಡಾಗಿ ಘೋಷಿಸಲು ಸರ್ಕಾರಕ್ಕೆ ಅಧಿಕಾರ ನೀಡಲಾಗುತ್ತದೆ.

ಈ ಕಾನೂನಿನ ಅನುಷ್ಠಾನದಿಂದ ಅರಣ್ಯಗಳ 'ವೈಜ್ಞಾನಿಕ ನಿರ್ವಹಣೆ' ಆರಂಭಕ್ಕೆ ನಾಂದಿ. ಕಾಡು ಹಾಗೂ ಕಾಡು ಉತ್ಪನ್ನಕ್ಕೆ ಸ್ಥಳೀಯ ಜನರಿಗಿದ್ದ ಹಕ್ಕುಗಳ ವಿನಾಶ ಈ ಮೂಲಕ ಅಧಿಕೃತಗೊಂಡಿತು

ವಸಾಹತುಷಾಹಿ ನಂತರದ ಭಾರತದ ಅರಣ್ಯ ನೀತಿಯೂ, ವಾಣಿಜ್ಯೀಕರಣದ ವಸಾಹತುಷಾಹಿ ಮಾರ್ಗದಲ್ಲಿ ಮುಂದುವರಿದಿದೆ.

ಹಿಮಾಲಯದ ಪರ್ವತ ಪ್ರದೇಶಗಳಲ್ಲಿ ಗರವಾಲ್ ಮಹಿಳೆಯರು ವಾಣಿಜ್ಯ ಶೋಷಣೆಯಿಂದ ಅರಣ್ಯಗಳ ಸಂರಕ್ಷಣೆ ಆರಂಭಿಸಿದರು. ಇದಕ್ಕಾಗಿ ಜೀವದ ಹಂಗನ್ನೇ ತೊರೆದು ಮರಗಳನ್ನು ತಮ್ಮ ಜೀವ ರಕ್ಷಕರೆಂದು ಅಪ್ಪಿಕೊಳ್ಳುತ್ತಾ ಪ್ರಸಿದ್ಧ ಜಿಪ್ಕೊ ಚಳವಳಿ ಆರಂಭಿಸಿದರು.

1970ರ ಆರಂಭದಲ್ಲಿ ಉತ್ತರ ಪ್ರದೇಶದ ಗರ್‌ವಾಲ ಪ್ರದೇಶದಲ್ಲಿ ಆರಂಭವಾದ ಜಿಪ್ಕೊ ತತ್ವ ಹಾಗೂ ಕ್ರಮ ಈಗ ಉತ್ತರದ ಹಿಮಾಚಲ ಪ್ರದೇಶ, ದಕ್ಷಿಣದ ಕರ್ನಾಟಕ, ಪಶ್ಚಿಮ ಭಾಗದ ರಾಜಸ್ತಾನ, ಪೂರ್ವ ಭಾಗದ ಒರಿಸ್ಸಾ ಹಾಗೂ ಮಧ್ಯಭಾರತ ಪ್ರದೇಶಗಳಿಗೆ ವ್ಯಾಪಿಸಿದೆ.

ವಿಶ್ವಸಂಸ್ಥೆಯ ಮಹಿಳಾ ದಶಕ ಹಾಗೂ 1972ರ ಸ್ಟಾಕ್‌ಹೋಮ್ ಪರಿಸರ ಸಮ್ಮೇಳನಕ್ಕೆ ಮುಂಚೆಯೇ ಮಹಿಳೆಯರ ಪರಿಸರ ಚಟುವಟಿಕೆಯ ಇತಿಹಾಸವಿದೆ. ಸುಮಾರು 300 ವರ್ಷಗಳಿಗೂ ಹೆಚ್ಚು ಹಿಂದೆ, ರಾಜಸ್ಥಾನದ ಬಿಷ್ಣೋಯ್ ಸಮುದಾಯದ ಜನ ಅಮೃತಾದೇವಿ ಎಂಬ ಮಹಿಳೆ ನೇತೃತ್ವದಲ್ಲಿ ಪವಿತ್ರ 'ಖೇಜ್ರಿ' ಮರಗಳನ್ನು ಉಳಿಸುವುದಕ್ಕಾಗಿ ಅವುಗಳನ್ನು ಆಲಂಗಿಸಿಕೊಂಡು ತಮ್ಮ ಜೀವವನ್ನು ತೆತ್ತರು. ಈ ಘಟನೆಯೊಂದಿಗೆ ಚಿಪ್ಕೊ ಇತಿಹಾಸ ಆರಂಭ.

ಇತ್ತೀಚಿನ 'ಚಿಪ್ಕೊ' (ಅಪ್ಪಿಕೊ') ಚಳುವಳಿಯನ್ನೂ ಮಹಿಳಾ ಚಳವಳಿ ಎಂದು ಸಾಮಾನ್ಯವಾಗಿ ಕರೆಯಲಾಗುತ್ತದೆ. ಆದರೆ ಪುರುಷ 'ಚಿಪ್ಕೊ' ಕಾರ್ಯಕರ್ತರಿಗಷ್ಟೇ ಹೆಚ್ಚಿನ ಪ್ರಚಾರ ದಕ್ಕಿದೆ, ಚಿಪ್ಕೊ ಇತಿಹಾಸ ಅತ್ಯಂತ ಸಾಹಸಿ ಮಹಿಳೆಯರ ದೃಷ್ಟಿ ಹಾಗೂ ಕ್ರಿಯೆಗಳು ಇತಿಹಾಸವಾಗಿದ್ದರೂ ಮಹಿಳೆಯರ ಕೊಡುಗೆಯನ್ನು ಅಗೋಚರವಾಗಿಸಲಾಗಿದೆ.

ಚಿಪ್ಕೊದಂತಹ ಪರಿಸರ ಚಳವಳಿಗಳು ಚಾರಿತ್ರಿಕ ಮೈಲಿಗಲ್ಲುಗಳಾಗಿವೆ. ಏಕೆಂದರೆ ಇವು ಮಹಿಳೆಯರ ಪರಿಸರ ಕುರಿತ ಒಳನೋಟಗಳು, ಈ ಮಹಿಳೆಯರ ಅನುಭವಗಳು ನಾವು ಒಂಟಿಯಲ್ಲ ಎಂಬುದನ್ನು ನಮಗೆ ನೆನಪಿಸುತ್ತದೆ. ನಮ್ಮದು ಮೊದಲ ಹೆಜ್ಜೆಗಳಲ್ಲ, ನಮಗಿಂತ ಮುಂಚೆಯೇ ಅನೇಕ ಮಹಿಳೆಯರು ಈ ಮಾರ್ಗ ಕ್ರಮಿಸಿದ್ದಾರೆ ಎಂಬುದನ್ನು ಇದು ನಮಗೆ ನೆನಪಿಸುತ್ತದೆ.

ಗರ್‌ವಾಲ್ ಹಿಮಾಲಯದಲ್ಲಿ ಚಿಪ್ಕೊ ಚಳವಳಿಯ ಪುನರುತ್ಥಾನ ಮಹಿಳಾ ಶಕ್ತಿ ಹಾಗೂ ಪರಿಸರ ಕಾಳಜಿಯ ಪ್ರಕ್ರಿಯೆ. ಚಿಪ್ಕೊ ಚಳವಳಿಯ ಪ್ರಮುಖ ಪ್ರವರ್ತಕರಲ್ಲಿ ಮೀರಾಬೆನ್, ಸರಳಾಬೆನ್, ಬಿಮಲಾ ಬೆನ್, ಹಿಮದೇವಿ, ಗೌರಿದೇವಿ, ಗಂಗಾದೇವಿ, ಬಚ್ನಿದೇವಿ, ಇತ್ವಾರಿದೇವಿ, ಚಾಮುನ್‌ದೇವಿ ಮತ್ತಿತರರಿದ್ದಾರೆ. ಈ ಚಳವಳಿಯ ಪುರುಷರಾದ ಸುಂದರಲಾಲ್ ಬಹುಗುಣ, ಚಂಡಿ ಪ್ರಸಾದ್ ಭಟ್, ಘನಶ್ಯಾಮ್ ಶೈಲಾನಿ ಹಾಗೂ ಧೂಮ್ ಸಿಂಗ್ ನೇಗಿ ಅವರು ಈ ಮಹಿಳೆಯರ ವಿದ್ಯಾರ್ಥಿಗಳು

ಅಥವಾ ಅನುಯಾಯಿಗಳು. ಗಾಂಧಿಯವರ ಆಪ್ತ ಶಿಷ್ಯೆಯಾಗಿದ್ದ ಮೀರಾಬೆನ್ 40ರ ದಶಕದ ಅಂತ್ಯದಲ್ಲಿ ಹಿಮಾಲಯ ಪ್ರದೇಶವನ್ನು ತಮ್ಮ ಕಾರ್ಯ ಚಟುವಟಿಕೆಯ ನೆಲೆಯಾಗಿರಿಸಿಕೊಂಡರು.

ಮೀರಾ ಬೆನ್‌ರ ಪರಿಸರ ಒಳನೋಟಗಳನ್ನು ಸುಂದರ ಲಾಲ್ ಬಹುಗುಣ ಅವರು ಪಡೆದುಕೊಂಡಿದ್ದಾರೆ. ಭಿಲಾಂಗನಾ ಕಣಿವೆಯಲ್ಲಿ ಮೀರಾ ಬೆನ್ ಜತೆಗೆ ಬಹುಗುಣ ಕಾರ್ಯ ನಿರ್ವಹಿಸಿದ್ದರು. ಸುಂದರಲಾಲ್ ಬಹುಗುಣ ಅವರು ಅನೇಕ ಬಾರಿ ಹೇಳಿದ್ದಾರೆ. "ನಾವು ಸಂದೇಶ ವಾಹಕರು ಮಾತ್ರ— ನಿಜವಾದ ಮುಖಂಡರು ಮಹಿಳೆಯರೇ".

ಚಿಪ್ಕೊದಂತಹ ಸಂರಕ್ಷಕರ ಹೋರಾಟಗಳ ಮುಖ್ಯ ಆದ್ಯತೆ, ಕಾಡು ಹಾಗೂ ಮರಗಳು-ಜೀವ ಪೋಷಣೆಯ ವ್ಯವಸ್ಥೆಯಾಗಿವೆ. ಹೀಗಾಗಿ ಇವುಗಳನ್ನು ರಕ್ಷಿಸಿ ಪುನರುತ್ಥಾನಗೊಳಿಸಬೇಕು. ಆದರೆ ಜೀವ ಪೋಷಣೆ ವ್ಯವಸ್ಥೆಯಿಂದ ಮರಗಳನ್ನು 'ಹಸಿರು ಚಿನ್ನ'ವಾಗಿ ಪರಿವರ್ತಿಸಲಾಗುತ್ತದೆ. ಎಲ್ಲಾ ಗಿಡ ನೆಡುವಿಕೆಯ ಘೋಷಣೆ ಹೀಗಿರುತ್ತದೆ-'ಹಣ ಮರಧ ಮೇಲೆ ಬೆಳೆಯುತ್ತದೆ'.

ಚಿಪ್ಕೊ ಮಹಿಳೆಯರು ಅರಣ್ಯ ನಿರ್ವಹಣೆಗೆ ಅಹಿಂಸಾತ್ಮಕ ಪರ್ಯಾಯವನ್ನು ಒದಗಿಸುತ್ತಾರೆ. ಪ್ರಕೃತಿಯ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವ ಮೂಲಕ, ಲಾಭಕ್ಕಾಗಿ ಖಾಸಗೀಕರಣಗೊಳಿಸುವ ಬದಲು ಪ್ರಕೃತಿ ಸಂಪತ್ತನ್ನು ಮೂಲ ಅಗತ್ಯಗಳಿಗೆ ಹಂಚಿಕೊಳ್ಳುವ ಆಶಯ ಇಲ್ಲಿನದು.

**ಅಧ್ಯಾಯ 5, ಆಹಾರ ಸರಪಳಿಯಲ್ಲಿ ಮಹಿಳೆ**

ಮರ, ಪ್ರಾಣಿ, ಬೆಳೆಗಳ ಮಧ್ಯದ ನಿಕಟ ಸಂಪರ್ಕ ಹಾಗೂ ಈ ಸಂಪರ್ಕ ಕಾಪಾಡುವಿಕೆಯ ಮಹಿಳೆಯ ಕಾರ್ಯದ ಮೇಲೆ ಆಹಾರ ಉತ್ಪಾದನೆಯ ಸ್ತ್ರೀಯಾತ್ಮಕತೆಯ ತತ್ವ ಆಧರಿಸಿದೆ. ಕೃಷಿಯಲ್ಲಿ ಮಹಿಳೆಯ ಕಾರ್ಯ ಪಾರಂಪರಿಕವಾಗಿ ಅರಣ್ಯ, ಪಶುಸಂಗೋಪನೆ ಹಾಗೂ ಕೃಷಿಯನ್ನು ಒಂದೆಡೆ ಸಮಗ್ರಗೊಳಿಸುವಂತಹದ್ದಾಗಿದೆ. ಪ್ರಕೃತಿ ಮಾದರಿಯ ಹಾಗೂ ಪ್ರಕೃತಿಯ ಜತೆ ಮಹಿಳೆ ಪಾಲ್ಗೊಳ್ಳುವಿಕೆ ಆಧರಿಸಿದ ಕೃಷಿ ಸ್ವಯಂ ಉತ್ಪಾದಕವಾದದ್ದು ಹಾಗೂ ಉಳಿಯುವಂತಹದ್ದು. ಏಕೆಂದರೆ ಆಂತರಿಕವಾಗಿಯೇ "ರೀಸೈಕಲ್" ಆಗುವ ಸಂಪನ್ಮೂಲಗಳು ಬೀಜ, ಮಣ್ಣು ತೇವ, ಮಣ್ಣು ಪೋಷಕಾಂಶ ಹಾಗೂ ಕೀಟ ನಿಯಂತ್ರಣಕ್ಕೆ ಅಗತ್ಯ ಕಚ್ಚಾವಸ್ತುಗಳನ್ನು ಒದಗಿಸುತ್ತವೆ.

'ಹಸಿರು ಕ್ರಾಂತಿ', 'ವೈಜ್ಞಾನಿಕ ಕೃಷಿ' ಇತ್ಯಾದಿ ಅನೇಕ ಹಣೆಪಟ್ಟಿಗಳಲ್ಲಿ ಬಂದಿರುವ ಆಹಾರ ಉತ್ಪಾದನೆಯ ಪುರುಷ ಪ್ರಧಾನ ಮಾದರಿ - ಅರಣ್ಯ, ಪಶು ಸಂಗೋಪನೆ ಹಾಗೂ ಕೃಷಿ ಮಧ್ಯದ ಅಗತ್ಯ ಬೆಸುಗೆಗಳನ್ನು ವಿಧ್ವಂಸಗೊಳಿಸಿದೆ.

ತೃತೀಯ ಜಗತ್ತಿನ ಹೆಚ್ಚಿನ ಬಡವರು ಇಂದು ಹಸಿವು ಕ್ಷಾಮಗಳ ಬಲಿಪಶುಗಳಾಗಲು ಮಾರಾಟ ಲಾಭಗಳನ್ನು ಮಾತ್ರ ಒಳ್ಳೆಯ ವ್ಯವಸ್ಥೆಯ ಸೂಚಕಗಳಾಗಿ ಕಾಣುವ ಪ್ರಗತಿಯ ಪಿತೃ ಪ್ರಧಾನ ಮಾದರಿ ಕಾರಣ.

ಪ್ರಕೃತಿಯ ಬಂಡವಾಳವನ್ನು ನಾಶಪಡಿಸಿ ಆಹಾರ ತಜ್ಞರು ಹಾಗೂ ಉತ್ಪಾದಕರಾಗಿ ಮಹಿಳೆಯರನ್ನು ಹೊರತು ಪಡಿಸಿರುವ ಪುರುಷ ಪ್ರಧಾನ ಕೃಷಿ ವಿಜ್ಞಾನ ಹಾಗೂ ಅಭಿವೃದ್ಧಿಯಲ್ಲಿ ನೆಲೆಯಾಗಿರುವ ಆಹಾರ ಬಿಕ್ಕಟ್ಟನ್ನು ಈ ಅಧ್ಯಾಯ ವಿಶ್ಲೇಷಿಸುತ್ತದೆ. ಆಹಾರ ಬೆಳೆಗಾಗಿ ಹಸಿರು ಕ್ರಾಂತಿ ಹಾಗೂ ಡೇರಿಗಾಗಿ ಬಿಳಿ ಕ್ರಾಂತಿ (ಕ್ಷೀರ ಕ್ರಾಂತಿ)ಯಲ್ಲಿ ಅಂತರ್ಗತವಾಗಿರುವ ಹಿಂಸಾಚಾರವನ್ನೂ ಈ ಅಧ್ಯಾಯ ಗುರುತಿಸಿದೆ. ಆಹಾರ ವಸ್ತುವಾಗಿ ಉತ್ಪಾದಿಸಿ, ಲಾಭಕ್ಕಾಗಿ ವಿನಿಮಯ ಮಾಡಿಕೊಳ್ಳಬಹುದಾದ ವಸ್ತುವಾಗಿ ಆಹಾರ ಕುರಿತ ದೃಷ್ಟಿಕೋನ ಬದಲಾಗಿರುವುದನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಕೃಷಿಯ ಆಂತರಿಕ ಸಂಪನ್ಮೂಲವಾಗಿ ಮಹಿಳೆಯರು ಹೆಚ್ಚಾಗಿ ಒದಗಿಸುತ್ತಿದ್ದ ಬೀಜ, ಮಣ್ಣು ಫಲವತ್ತತೆ ಹಾಗೂ ಕೀಟ ನಿಯಂತ್ರಣ ಕ್ರಮಗಳನ್ನು ಕೆಲವೇ ಕೆಲವು ಕೃಷಿ ಉದ್ಯಮ ಕಂಪನಿಗಳು ಈಗ ಉತ್ಪಾದಿಸುತ್ತಿವೆ.

40 ಶತಮಾನಗಳಿಗೂ ಹೆಚ್ಚು ಕಾಲ ತೃತೀಯ ಜಗತ್ತಿನ ರೈತರು ಅದರಲ್ಲೂ ಹೆಚ್ಚಾಗಿ ಮಹಿಳೆಯರು ಕೃಷಿ ಕ್ಷೇತ್ರದಲ್ಲಿ ಹೊಸ ಪ್ರಯೋಗಗಳನ್ನು ಮಾಡಿದ್ದಾರೆ. ಬೆಳೆಗಳ ಮಾದರಿಗಳು ವಿವಿಧ ಖಂಡಗಳನ್ನು ದಾಟಿವೆ. ಬೆಳೆ ಮಾದರಿಗಳು ಸುಧಾರಿಸಿವೆ. ಬೆಳೆಗುಂಪು ಹಾಗೂ ವ್ಯವಸ್ಥೆಯ ಅಗತ್ಯಗಳಿಗೆ ಅನುಗುಣವಾಗಿ ಸಂಮಿಶ್ರ ಬೆಳೆ ವಿಧಾನಗಳನ್ನು ರೂಪಿಸಲಾಗಿದೆ. ಈ ಪ್ರಯೋಗಗಳು ಉಳಿಯುವಂತಹದ್ದು. ಪರಿಸರ ಸಮತೋಲನ ಸಾಧನೆಯಿಂದ ಅವು ಉಳಿದಿವೆ. ರೈತರು ತಜ್ಞರಾಗಿ, ಸಸ್ಯ ಬೆಳೆ

ಗಾರರಾಗಿ, ಮಣ್ಣು ವಿಜ್ಞಾನಿಗಳಾಗಿ, ಜಲ ಮ್ಯಾನೇಜರ್‌ಗಳಾಗಿ ಈ ಎಲ್ಲಾ ಶತಮಾನಗಳ ಕಾಲ ವಿಶ್ವಕ್ಕೆ ಆಹಾರ ಒದಗಿಸಿದ್ದಾರೆ.

ಸುಮಾರು 20ಕ್ಕೂ ಹೆಚ್ಚು ವರ್ಷಗಳ ಹಿಂದೆ ಈ 40ಕ್ಕೂ ಹೆಚ್ಚು ಶತಮಾನಗಳ ಕಾಲದ ಕೃಷಿ ಮಾಹಿತಿ ಜ್ಞಾನ ಅಳಿಸಿ ಹೋಗಲು ಆರಂಭವಾಯಿತು. ಫಿಲಿಫೀನ್ಸ್‌ನ ಅಂತರರಾಷ್ಟ್ರೀಯ ಅಕ್ಕಿ ಸಂಶೋಧನಾ ಸಂಸ್ಥೆ (ಐ ಆರ್ ಆರ್ ಐ) ಹಾಗೂ ಮೆಕ್ಸಿಕೋದಲ್ಲಿರುವ ಸಿ ಐ ಎಂ ಎಂ ವೈ ಟಿ (ಅಂತರರಾಷ್ಟ್ರೀಯ ಮೆಕ್ಕೆಜೋಳ ಹಾಗೂ ಗೋಧಿ ಸುಧಾರಣಾ ಕೇಂದ್ರ)ಗಳಂತಹ ಜಾಗತಿಕ ಸಂಶೋಧನಾ ಕೇಂದ್ರಗಳು ರೂಪಿಸಿರುವ ಕೃಷಿ ವಿಧಾನಗಳ ಆಧಾರದ ಮೇಲೆ ಪ್ರಕೃತಿ ಹಾಗೂ ಮನುಷ್ಯ ಜ್ಞಾನದ ವೈವಿಧ್ಯತೆಗೆ ಧಕ್ಕೆ ತರುವಂತಹ ರೀತಿಯಲ್ಲಿ ಪಾಶ್ಚಿಮಾತ್ಯ ಪುರುಷ ತಜ್ಞರು ಹಾಗೂ ಬಹುರಾಷ್ಟ್ರೀಯ ಕಂಪನಿಗಳು ರೂಪಿಸಿದ ಹಸಿರು ಕ್ರಾಂತಿ ಇದಕ್ಕೆ ಕಾರಣ.

ಪಾಶ್ಚಿಮಾತ್ಯ ಹಸಿರು ಕ್ರಾಂತಿ ಮಾದರಿಯ ಅಳವಡಿಕೆಯೊಂದಿಗೆ ಕೃಷಿ ಅರ್ಥವೇ ಬದಲಾಯಿತು. ಪ್ರಕೃತಿಯ ಬಂಡವಾಳವನ್ನು ಫಲವತ್ತಾದ ಮಣ್ಣಿನ ಮೇಲೆ ಜತನದಿಂದ ಕಾಪಾಡಿ ಸಮಾಜಕ್ಕೆ ಆಹಾರ-ಪೌಷ್ಟಿಕತೆ ಒದಗಿಸುವ ಕ್ರಿಯೆಯಾಗಿ ಇದು ಉಳಿಯಲಿಲ್ಲ. ಬದಲಿಗೆ ಲಾಭಕ್ಕಾಗಿ ಕೃಷಿ ವಸ್ತುಗಳನ್ನು ಉತ್ಪಾದಿಸುವ ಚಟುವಟಿಕೆಯಾಯಿತು.

ಮಹಿಳೆಯರು ವಿಶ್ವದ ಮೂಲ ಆಹಾರ ಉತ್ಪಾದಕರಾಗಿದ್ದರು. ಆಹಾರ ಸರಪಳಿಯಲ್ಲಿ ಅವರು ನಿರ್ವಹಿಸುವ ಕಾರ್ಯದಿಂದಾಗಿ ತೃತೀಯ ಜಗತ್ತಿನ ಆಹಾರ ಉತ್ಪಾದನೆ ವ್ಯವಸ್ಥೆಯಲ್ಲಿ ಅವರ ಪ್ರಮುಖ ಪಾತ್ರ ಮುಂದುವರಿದಿದೆ. ಕೃಷಿ ಕ್ಷೇತ್ರದಲ್ಲಿ ವಿಜ್ಞಾನ, ಮತ್ತಿತರ ಆರ್ಥಿಕ ಚಟುವಟಿಕೆಗಳ ಕ್ಷೇತ್ರಗಳಲ್ಲಿಯಂತೇ ಮಹಿಳೆಯರ ವೈಜ್ಞಾನಿಕ ಹಾಗೂ ಆರ್ಥಿಕ ಕೊಡುಗೆ, ಪುರುಷರು ಬರೆದ ಇತಿಹಾಸ ಹಾಗೂ ಮಾನವಶಾಸ್ತ್ರಗಳಲ್ಲಿ ಮರೆಯಾಗಿದೆ. ಸಂಗ್ರಹ-ಬೇಟೆ ವ್ಯವಸ್ಥೆಯಿಂದ ಕೃಷಿ ಹಾಗೂ ಅಲೆಮಾರಿ ಬದುಕು ವಿಧಾನಗಳಿಗೆ ಮಾನವ ಸಮಾಜ ಸ್ಥಿತ್ಯಂತರವಾಗುವ ಸಂದರ್ಭಗಳಲ್ಲಿ ಸಸ್ಯಪೋಷಣೆ ಹಾಗೂ ಪಶುಸಂಗೋಪನೆ ವಿಧಾನಕ್ಕೆ ಮಹಿಳೆಯರ ಅಗೋಚರ ಕೊಡುಗೆ ಕುರಿತು ಸ್ತ್ರೀವಾದಿ ಅಧ್ಯಯನಗಳು ಕೇಂದ್ರೀಕರಿಸುತ್ತಿವೆ.

ಕೃಷಿರಂಗದಲ್ಲಿ ಮಹಿಳೆಯ ಕೆಲಸ ಅಪಾರವಾದದ್ದು. ಆದರೆ ಕೃಷಿ ಅಭಿವೃದ್ಧಿ ಪಾಶ್ಚಿಮಾತ್ಯ ಬಂಡವಾಳಶಾಹಿ ಪಿತೃಪ್ರಧಾನ ವ್ಯವಸ್ಥೆಯ ಯೋಜನೆಯಾದಾಗ ಮಹಿಳೆ ಹಾಗೂ ಪ್ರಕೃತಿಯ ಕೆಲಸ, ಉತ್ಪಾದಕತೆ ಅಗೋಚರವಾಗುತ್ತದೆ. ಈ ವ್ಯವಸ್ಥೆಯಲ್ಲಿ 'ಉತ್ಪಾದಕತೆ' ಹೆಚ್ಚಳ, ಆಹಾರ ಉತ್ಪಾದಕರಾಗಿ ಹಾಗೂ ಸಂಸ್ಕರಣಕಾರರಾಗಿ ಮಹಿಳೆಯ ಉತ್ಪಾದಕತೆ ಪ್ರಮಾಣವನ್ನು ಇಳಿಸುತ್ತದೆ. ಮನೆಯಿಂದ ಗೋಧಿ ಹಾಗೂ ಅಕ್ಕಿಯನ್ನು ಗಿರಣಿಗೆ ಒಯ್ದಾಗ ಮಹಿಳೆಯರು ಕೆಲಸ ಕಳೆದುಕೊಳ್ಳುವರಲ್ಲದೆ ಸಮಾಜಪೌಷ್ಟಿಕತೆಯನ್ನು ಕಳೆದುಕೊಳ್ಳುತ್ತದೆ. ಮನೆಯಲ್ಲಿ ಧಾನ್ಯ ಸಂಸ್ಕರಣ ಮಾಡುವ ವಿಧಾನದಲ್ಲಿ ಅಕ್ಕಿ ಹಾಗೂ ಗೋಧಿ ಹಿಟ್ಟು ತಿನ್ನಬಹುದಾದ ಪದಾರ್ಥಗಳಾಗಿಯೇ ಉಳಿಯುತ್ತದೆ. ಆದರೆ ಯಂತ್ರದ ಗಿರಣಿಯಲ್ಲಿ ಇದು ನಾಶವಾಗುತ್ತದೆ. ಆಹಾರದ ಅತ್ಯಂತ ಪೌಷ್ಟಿಕವಾದ ಭಾಗ ಅನುಪಯುಕ್ತ ವಸ್ತುವಾಗಿ ಪರಿವರ್ತಿತವಾಗುತ್ತದೆ. ಏಕೆಂದರೆ ಇಲ್ಲಿ ಲಾಭ ಸೃಷ್ಟಿಗಾಗಿ ಯಂತ್ರೋಪಕರಣದ ದಕ್ಷತೆ ನಿರ್ಧಾರಕ ಅಂಶ. ಪೌಷ್ಟಿಕತೆ ಸೃಷ್ಟಿಸುವುದು ಮಹಿಳೆಯ ದಕ್ಷತೆಯಲ್ಲ.

ಯಾಂತ್ರಿಕ ಸಂಸ್ಕರಣ ಹಾಗೂ ಗಿರಣಿ ಮೊದಲು ಆಹಾರದ ಪೌಷ್ಟಿಕ ಮೌಲ್ಯ ಹಾಗೂ ನಂತರ ಮಹಿಳೆಯರ ಉತ್ಪಾದಕತೆ ನಾಶಪಡಿಸಿ ಲಾಭ ಗಳಿಸುತ್ತದೆ. ನಂತರ ಸಂಸ್ಕರಣ ಉದ್ಯಮದ ಮೂಲಕ ಮತ್ತೆ ಅದಕ್ಕೆ ಕಳೆದುಹೋದ 'ಪೌಷ್ಟಿಕತೆ' ತುಂಬುವ ಮೂಲಕವೂ ಲಾಭ ಗಳಿಸುತ್ತದೆ.

ಸಂರಕ್ಷರು ಹಾಗೂ ಉತ್ಪಾದಕರಾಗಿದ್ದ ಮಹಿಳೆಯರು ಬರೇ ಗ್ರಾಹಕ ಮಟ್ಟಕ್ಕೆ ಇಳಿದ ನಂತರ ಕೃಷಿಯಲ್ಲಿ ಅವರ ಉತ್ಪಾದಕ ಪಾತ್ರಗಳು ಮತ್ತಷ್ಟು ಅಗೋಚರತೆಗೆ ಕುಸಿಯುತ್ತದೆ.

ತೃತೀಯ ಜಗತ್ತಿನ ಬಹುತೇಕ ಎಲ್ಲ ಭಾಗಗಳಲ್ಲಿ ಆಹಾರ ವ್ಯವಸ್ಥೆಯಲ್ಲಿ ಪುರುಷರಿಗಿಂತ ಮಹಿಳೆಯರು ಹೆಚ್ಚು ಕೆಲಸ ಮಾಡುವುದು ಕಂಡುಬರುತ್ತದೆ. ಆಫ್ರಿಕಾದಲ್ಲಿ ಆಹಾರ ಉತ್ಪಾದನೆ ಮಹಿಳೆಯರ ಕೈಯಲ್ಲೇ ಇದೆ. ಆದರೆ ಕೃಷಿ ಮೇಲಿನ ಅವರ ನಿಯಂತ್ರಣ, ಹಸಿರು ಕ್ರಾಂತಿ ಹಾಗೂ ವಾಣಿಜ್ಯ ಬೆಳೆ ಕೃಷಿ ವಿಧಾನ ಮೂಲಕ ಹೆಚ್ಚಿನ ಪ್ರಮಾಣದಲ್ಲಿ ಕುಸಿಯುತ್ತಿರುವುದೂ ನಿಜ.

ಬಂಡವಾಳಶಾಹಿ ಹಾಗೂ ಹಣಕಾಸಿನ ಅರ್ಥ ವ್ಯವಸ್ಥೆಯ ಪ್ರಭಾವ ಭೂಮಿಯ ಉತ್ಪಾದಕ ಶಕ್ತಿ-ಅಧಿಕಾರಗಳನ್ನು ಕುಂದಿಸುತ್ತಿದೆ. ಕೃಷಿಯ ವಾಣಿಜ್ಯೀಕರಣ ಆಹಾರ ಬೆಳೆ ಉತ್ಪಾದನೆಗಾಗಿ ಲಭ್ಯವಿರುವ ಭೂಮಿಯ ಪ್ರಮಾಣದ ಮೇಲೆ ನಿಯಂತ್ರಣಗಳನ್ನು ಹೇರುತ್ತದೆ. ಆಹಾರ ಬೆಳೆಗಳಲ್ಲಿ ಮಹಿಳೆಯ ಉತ್ಪಾದಕತೆ ಸ್ಥಗಿತಗೊಂಡಿವೆ. ಕೆಲವು ಸಂದರ್ಭಗಳಲ್ಲಿ ಪೂರ್ಣ ಕುಂದಿಹೋಗಿದೆ. ಆದರೆ ಪುರುಷ ನಿಯಂತ್ರಣದ ವಾಣಿಜ್ಯ ಬೆಳೆ ಉತ್ಪಾದನೆ ಹೆಚ್ಚಳ ಮನೆಗೆ ಲಭ್ಯವಾಗ ಬೇಕಾದ ಆಹಾರ ಲಭ್ಯತೆಯನ್ನು ಕಡಿಮೆ ಮಾಡುತ್ತಿದೆ.

ರಾಷ್ಟ್ರದ ವಾಯುವ್ಯ ರಾಜ್ಯಗಳಾದ ಪಂಜಾಬ್ ಹಾಗೂ ಹರಿಯಾಣಗಳು ಹೊಸ ಹಸಿರುಕ್ರಾಂತಿ ತಂತ್ರಜ್ಞಾನವನ್ನು ಅಳವಡಿಸಿಕೊಂಡಿರುವ ರಾಜ್ಯಗಳಲ್ಲಿ ಅಗ್ರಸ್ಥಾನದಲ್ಲಿವೆ. ಈ ಪ್ರದೇಶಗಳಲ್ಲಿ ಚಾರಿತ್ರಿಕವಾಗಿ ಹಾಗೂ ಇತ್ತೀಚಿನ ದಿನಗಳಲ್ಲಿ ಮಹಿಳೆಯರ ವಿರುದ್ಧದ ತಾರತಮ್ಯ ಹೆಚ್ಚಾಗಿದೆ. ವರದಕ್ಷಿಣೆ ವಿವಾದಗಳಿಗೆ ಸಂಬಂಧಿಸಿದ ಮಹಿಳೆ ವಿರುದ್ಧದ ಹಿಂಸಾಚಾರಗಳು ಹಸಿರು ಕ್ರಾಂತಿ ಪ್ರದೇಶಗಳಲ್ಲಿ ಹೆಚ್ಚಿರುವುದು ಅಧ್ಯಯನಗಳಿಂದ ವ್ಯಕ್ತವಾಗಿದೆ. ಹೆಣ್ಣು ಭ್ರೂಣದ ಆಯ್ಕೆಯ ಗರ್ಭಪಾತಕ್ಕೆ ಅವಕಾಶ ನೀಡುವ ಹೆಣ್ಣು ಶಿಶುಹತ್ಯೆಯ ಆಧುನಿಕ ರೂಪವಾಗಿ ಆಮ್ನಿಯೊ ಸಿಂಥೆಸಿಸ್ ಅನ್ನು ಪರಿವರ್ತಿಸಿದ ಪ್ರದೇಶಗಳಲ್ಲಿ ಇದು ಮೊದಲನೆಯದು ಎಂಬುದನ್ನು ಇಲ್ಲಿ ಸ್ಮರಿಸಬೇಕು. 1978 ಹಾಗೂ 1983ರ ಮಧ್ಯಭಾಗದಲ್ಲಿ ಲಿಂಗ ನಿರ್ಧಾರದ ಪರೀಕ್ಷೆ ನಂತರ 78,000 ಹೆಣ್ಣು ಭ್ರೂಣಗಳನ್ನು ಇಲ್ಲಿ ಗರ್ಭಪಾತ ಮಾಡಲಾಗಿದೆ. ಮೊದಲ ಲಿಂಗ ನಿರ್ಧಾರ ಕ್ಲಿನಿಕ್ ಸ್ಥಾಪನೆ ಆದದ್ದು ಪಂಜಾಬ್‌ನ ಅಮೃತಸರದಲ್ಲಿ.

ತಮಿಳುನಾಡಿನ ಭೂಹೀನ ಸಮುದಾಯವಾದ ಕಲ್ಲಾರ್ ಜನಾಂಗ ಕಳೆದ ಸುಮಾರು 15-20 ವರ್ಷಗಳಿಂದ ಹೆಣ್ಣು ಮಕ್ಕಳ ಹತ್ಯೆಯನ್ನು ಮಾಮೂಲು ವಿಧಾನವಾಗಿ ರೂಪಿಸಿಕೊಂಡಿದೆ. ಈ ಹತ್ಯೆಯ ಹಿಂದಿನ ತರ್ಕವನ್ನು ಹಸಿರು ಕ್ರಾಂತಿ ಜತೆ ಬೆಸುಗೆ ಹಾಕಲಾಗುತ್ತದೆ. ವಾಣಿಜ್ಯೀಕರಣದಿಂದ ಗಂಡು-ಹೆಣ್ಣು ಕೂಲಿಗಳ ಮಧ್ಯೆ ವಿಭಿನ್ನ ಕೂಲಿ ವೇತನ ಜಾರಿಗೆ ಬಂದಿದೆ. ಮತ್ತೊಂದು ಹಂತದಲ್ಲಿ ವರದಕ್ಷಿಣೆಯ ಬೇಡಿಕೆಗಳು ಮೊದಲೇ ಬಡತನದಿಂದ ಕಂಗಾಲಾದ ಮಹಿಳೆಯರು ಹೆಣ್ಣು ಶಿಶುಹತ್ಯೆಗಿಳಿಯುವಂತೆ ಇವು ಪ್ರೇರೇಪಿಸಿದೆ.

ಉಸಿಲಂ ಪೆಟ್ಟಿಗೆ ಸುಮಾರು 30 ವರ್ಷಗಳ ಹಿಂದೆ ನೀರಾವರಿ ನೀರು ತಂದುಕೊಟ್ಟ ದೈಗಾಯ್ ನದಿ ಮೇಲಿನ ಅಣೆಕಟ್ಟಿನ ನಂತರ ಕಲ್ಲಾರ್ ಜನಾಂಗದಲ್ಲಿ ವರದಕ್ಷಿಣೆ ವ್ಯವಸ್ಥೆ ಜಾರಿಗೆ ಬಂತು ಎಂದು ಹೇಳಲಾಗಿದೆ. ಅತಿಯಾದ ವಾಣಿಜ್ಯೀಕರಣ ಸಮೃದ್ಧಿಯೊಂದಿಗೆ ಹೆಣ್ಣಿನ ಕಡೆಗಣಿಸುವಿಕೆ, ಹೆಚ್ಚಿನ ವರದಕ್ಷಿಣೆ ಬೇಡಿಕೆಗಳಿಗೆ ನಾಂದಿ. ಹೆಚ್ಚಿನ ವರದಕ್ಷಿಣೆ ಹೆಣ್ಣು ಶಿಶುಹತ್ಯೆಗೆ ಕಾರಣ. ಈ ಶಿಶುಹತ್ಯೆಗೆ ಮೂಲ ವರದಕ್ಷಿಣೆ. ಈ ಎರಡರ ಮೂಲ ಉಸಿಲಂಪಟ್ಟಿಯ ಹಸಿರುಕ್ರಾಂತಿ.

ಹಸಿರು ಕ್ರಾಂತಿಯ ಯಶಸ್ವಿ ವ್ಯಾಪಿಸುವಿಕೆ ಮಹಿಳೆಯರ ವಿರುದ್ಧದ ಪೂರ್ವಾಗ್ರಹಗಳನ್ನು ಮತ್ತಷ್ಟು ಆಳಗೊಳಿಸಿದೆ ಎಂದು ವಂದನಾ ಶಿವ ವಿಶ್ಲೇಷಿಸುತ್ತಾರೆ. ಭಾರತದಲ್ಲಿ ಕಳೆದ ದಶಕಗಳಲ್ಲಿ ಸ್ತ್ರೀ-ಪುರುಷರ ಅನುಪಾತ ಪ್ರಮಾಣ ಕಡಿಮೆಯಾಗುತ್ತಿದೆ ಎಂಬುದಕ್ಕೆ ಅಂಕಿ ಅಂಶಗಳನ್ನು ಒದಗಿಸುತ್ತಾರೆ.

ಆಹಾರ ಸರಪಳಿಯಲ್ಲಿ ಬೀಜಗಳೇ ಮೊದಲ ಸಂಪರ್ಕ ಸೇತು. ತೃತೀಯ ಜಗತ್ತಿನ ರೈತ ಮಹಿಳೆಯರು ಸಸ್ಯ ಜಾತಿ ಸಂಪನ್ಮೂಲಗಳ ಮೇಲೆ ಹೊಂದಿದ್ದ ನಿಯಂತ್ರಣವನ್ನು ರದ್ದುಪಡಿಸಿ 'ಹಸಿರು ಕ್ರಾಂತಿ' ಬೀಜಗಳನ್ನು ವಾಣಿಜ್ಯೀಕರಿಸಿ, ಖಾಸಗೀಕರಣಗೊಳಿಸಿತು. ಇದನ್ನು ಸಿಐಎಂಎಂವೈಟಿ, ಐಆರ್‌ಆರ್‌ಐ ಹಾಗೂ ಬಹುರಾಷ್ಟ್ರೀಯ ಬೀಜ ನಿಗಮಗಳಲ್ಲಿನ ಪಾಶ್ಚಿಮಾತ್ಯ ಪುರುಷ ತಂತ್ರಜ್ಞರಿಗೆ ನೀಡಲಾಯಿತು.

ಭಾರತದಾದ್ಯಂತ ಬರಗಾಲದಲ್ಲೂ ಬಿತ್ತನೆ ಬೀಜದ ಧಾನ್ಯವನ್ನು ಪ್ರತಿ ಮನೆಯಲ್ಲಿ ಸಂರಕ್ಷಿಸಿ ಇಡಲಾಗುತ್ತದೆ. ಬೀಜ ನಷ್ಟದಿಂದ ಆಹಾರ ಉತ್ಪಾದನೆ ಚಕ್ರಕ್ಕೆ ಧಕ್ಕೆಯಾಗಬಾರದು ಎಂಬುದು ಇದರ ಉದ್ದೇಶ. ಭಾರತದ ರೈತ ಮಹಿಳೆಯರು ಸಾವಿರಾರು ವರ್ಷಗಳಿಂದ ಆಹಾರ ಉತ್ಪಾದನೆಯ ತಳಿಶಾಸ್ತ್ರದ ಮೂಲವನ್ನು ಜತನದಿಂದ ಕಾಪಾಡಿಕೊಂಡು ಬಂದಿದ್ದಾರೆ. ಲಕ್ಷಾಂತರ ವರ್ಷಗಳಿಂದ ರೂಪಿಸಲಾದ ಈ ಸಂಪತ್ತನ್ನು "ಪುರಾತನ ಗೊಡ್ಡು" ಸಂಪ್ರದಾಯಗಳೆಂದು ಪುರುಷ ದೃಷ್ಟಿಕೋನ ಬಣ್ಣಿಸಿ, ತನ್ನ ಉತ್ಪನ್ನಗಳು "ಅತ್ಯಾಧುನಿಕ ಮಾದರಿ"ಯ ಬೀಜಗಳೆಂದು ಪ್ರತಿಪಾದಿಸಿಕೊಂಡಿದೆ.

ಹಸಿರು ಕ್ರಾಂತಿಯ ಪುರುಷ ದೃಷ್ಟಿಕೋನದ ಬಿತ್ತನೆ ಬೀಜದ ಕಾರ್ಯತಂತ್ರ, ತಳಿ ವೈವಿಧ್ಯ ಸ್ತ್ರೀ ತತ್ವದ ವಿನಾಶ ವನ್ನೂ ಸೂಚಿಸುತ್ತದೆ. ಸಸ್ಯ ತಳಿ ಶಾಸ್ತ್ರದಲ್ಲಿ ಸ್ತ್ರೀಯಾತ್ಮಕತೆ ತತ್ವದ ಸಾವು,ಲಾಭ ಹಾಗೂ ನಿಯಂತ್ರಣ ಮೂಲಕ್ಕೆ ನಾಂದಿಯಾಯಿತು. ಹೈಬ್ರಿಡ್ 'ಮಾಂತ್ರಿಕ' ಬೀಜಗಳು ವಾಣಿಜ್ಯ ಮಾಂತ್ರಿಕತೆಯಾಯಿತು. ಏಕೆಂದರೆ ಪ್ರತಿವರ್ಷ ರೈತರು ಇದರ ಹೊಸ ಸರಬರಾಜನಿಂದ್ದ ಬೀಜಗಳನ್ನು ಖರೀದಿಸಬೇಕಾದ ಸ್ಥಿತಿ. ತಾವೇ ಸ್ವತಃ ಅದನ್ನು ಉತ್ಪಾದಿಸಲಾಗದ ಸ್ಥಿತಿ ಸೃಷ್ಟಿ. ಹೈಬ್ರಿಡ್ ಧಾನ್ಯ ಬಿತ್ತನೆ ಬೀಜ ಉತ್ಪಾದಿಸುವುದಿಲ್ಲ. ಏಕೆಂದರೆ ಮುಂದಿನ ತಲೆ ಮಾರಿಗೆ ಹೈಬ್ರಿಡ್‌ಗಳು ತಮ್ಮ ಬಲವನ್ನು ವರ್ಗಾಯಿಸುವುದು ಸಾಧ್ಯವಿಲ್ಲ. ಹೈಬ್ರೀಕರಣದಿಂದ ಬೀಜ, ಸಸ್ಯ ಬದುಕಿನ ಮೂಲವಾಗಲಿಲ್ಲ. ಖಾಸಗಿ ಲಾಭದ ಮೂಲ ವಾದವು.

ಹಸಿರು ಕ್ರಾಂತಿ ಬೀಜ ಮಾದರಿಗಳನ್ನು ಮಾತ್ರವಲ್ಲ. ಇಡೀ ಬೆಳೆಗಳನ್ನೇ ಸ್ಥಾನ ಪಲ್ಲಟ ಮಾಡಿದೆ. ಪೌಷ್ಟಿಕ ಬೆಳೆಯಾದ ರಾಗಿ ಹಾಗೂ ಜೋಳಗಳನ್ನು 'ಅಲ್ಪ ದರ್ಜೆಯವು' ಎಂದು ಬಂಡವಾಳಶಾಹಿ ಪಿತೃಪ್ರಧಾನ ವ್ಯವಸ್ಥೆಯಲ್ಲಿ ನೆಲೆಯೂರಿದ ಕೃಷಿ ವಿಜ್ಞಾನ ಮಾತ್ರ ಕರೆಯಲು ಸಾಧ್ಯ. ರೈತ ಮಹಿಳೆಯರಿಗೆ ತಮ್ಮ ಕುಟುಂಬಗಳ ಪೌಷ್ಟಿಕತೆಯ ಅಗತ್ಯಗಳು ಹಾಗೂ ತಾವು ಬೆಳೆಯುವ ಆಹಾರದ ಪೌಷ್ಟಿಕ ಅಂಶಗಳು ಗೊತ್ತಿದ್ದವು. 'ಒರಟು ಧಾನ್ಯ' ಅಥವಾ 'ಕಡಿಮೆ ದರ್ಜೆಯ ಬೆಳೆ'ಗಳೆಂದು ಕರೆಯಲಾಗುವ ಬೆಳೆಗಳು ಪೌಷ್ಟಿಕತೆ ದೃಷ್ಟಿಯಿಂದ ಉತ್ಪಾದಕತೆಯ ಬೆಳೆಗಳು ಎಂದು ವರ್ಗೀಕರಿಸಲಾಗಿದೆ. ಹೀಗಾಗಿ ಗರ್‌ವಾಲ್‌ನ ಮಹಿಳೆಯರು 'ಮಂಡುವಾ', ಕರ್ನಾಟಕದ ಮಹಿಳೆಯರು 'ರಾಗಿ' ಬೆಳೆಯುವುದನ್ನೂ ಮುಂದುವರಿಸಿದ್ದಾರೆ.

ಹಿಮಾಲಯದ ತಪ್ಪಲಿನ ಹಳ್ಳಿಯೊಂದರ ಮಹಿಳೆ ಹೀಗೆ ಹೇಳುತ್ತಾಳೆ. "ನಮ್ಮ 'ಮಂಡುವಾ' ಅಥವಾ 'ಜಂಗೋರಾ' ಇಲ್ಲದೆ ನಾವು ದುಡಿಮೆ ಮಾಡಲಿಕ್ಕಾಗುವುದಿಲ್ಲ. ಈ ಧಾನ್ಯಗಳೇ ನಮ್ಮ ಆರೋಗ್ಯ ಹಾಗೂ ಶಕ್ತಿಯ ಮೂಲ."

ಪಂಜಾಬಿನಲ್ಲಿ ಹಸಿರು ಕ್ರಾಂತಿ, ಪಾರಂಪರಿಕವಾದ ಬೇಳೆ ಕಾಳು–ದ್ವಿದಳ ಧಾನ್ಯ– ತೈಲ ಬೀಜಗಳ ಸಂಮ್ಮಿಶ್ರ ಬೆಳೆ ವಿಧಾನವನ್ನು ಹಾಳು ಮಾಡಿದೆ. ಇದರಿಂದ ದ್ವಿದಳ ಧಾನ್ಯ ಹಾಗೂ ತೈಲ ಬೀಜಗಳ ಉತ್ಪಾದನೆ ಇಳಿಮುಖವಾಗಿದೆ.

ಅಕ್ಕಿ, ಏಷ್ಯಾದ ಬಹಳಷ್ಟು ರಾಷ್ಟ್ರಗಳಲ್ಲಿ ದಿನನಿತ್ಯದ ಆಹಾರ. ಭಾರತದಲ್ಲಿ ಒಂದಾನೊಂದು ಕಾಲದಲ್ಲಿ 4 ಲಕ್ಷ ಅಕ್ಕಿ ಮಾದರಿಗಳಿದ್ದವು. ಆದರೆ ಕಳೆದ ಅರ್ಧ ಶತಮಾನದಲ್ಲಿ ಭಾರತದಲ್ಲಿ ಸುಮಾರು 30,000 ವಿವಿಧ ಮಾದರಿ ಅಕ್ಕಿ ಬೆಳೆದಿರಬಹುದು. ಹಸಿರು ಕ್ರಾಂತಿಯಿಂದ ಈ ತಳಿ ವೈವಿಧ್ಯ ನಾಶವಾಗಿ ಐ ಆರ್ ಆರ್ ಐನ ಏಕರೂಪ ಹೈಬ್ರಿಡ್ ತಳಿಗಳು ಪ್ರಾಬಲ್ಯ ಸ್ಥಾಪಿಸಿವೆ.

## ಅಧ್ಯಾಯ 6–ಮಹಿಳೆ ಮತ್ತು ಮಾಯವಾಗುತ್ತಿರುವ ಜಲ

ಸಸ್ಯ, ಪ್ರಾಣಿ ಹಾಗೂ ಮಾನವ ಜೀವನದ ಉಳಿವಿಗೆ ಬೆದರಿಕೆ ಒಡ್ಡುತ್ತಿರುವ ಜಲ ಬಿಕ್ಕಟ್ಟನ್ನು ಈ ಅಧ್ಯಾಯ ವಿಶ್ಲೇಷಿಸುತ್ತದೆ. ಭಾರತದ ಬತ್ತಿ ಹೋಗುವಿಕೆ ನೈಸರ್ಗಿಕ ವಿಪತ್ತು ಎನ್ನುವುದಕ್ಕಿಂತ ಮಾನವ ನಿರ್ಮಿತ. ನೀರು ಹಾಗೂ ನೀರು ಅಭಾವದ ಸಮಸ್ಯೆ 80ರ ದಶಕದ ಹೋರಾಟಗಳಲ್ಲಿ ಪ್ರಮುಖವಾದ ವಿಚಾರವಾಗಿತ್ತು.

ಸ್ವಾತಂತ್ರ್ಯಾನಂತರ ಆಧುನಿಕ ಭಾರತ ನಿರ್ಮಾಣ ಪುನಶ್ಚೇತನಗೊಂಡಿತು. ಪ್ರವಾಹ ನಿಯಂತ್ರಣ, ನೀರಾವರಿ ಹಾಗೂ ವಿದ್ಯುತ್ ಉತ್ಪಾದನೆಗೆ ಅಣೆಕಟ್ಟುಗಳ ನಿರ್ಮಾಣ ಸಾಂಕ್ರಾಮಿಕವಾಯಿತು.

ಕಳೆದ ಮೂರು ದಶಕಗಳಲ್ಲಿ ಭಾರತದಲ್ಲಿ 1,554ಕ್ಕೂ ಹೆಚ್ಚು ದೊಡ್ಡ ಅಣೆಕಟ್ಟುಗಳನ್ನೂ ಕಟ್ಟಲಾಗಿದೆ. 1955 ರಿಂದ 1980ರ ಅವಧಿಯವರೆಗೆ ಭಾರತ ಭೂ ಹಾಗೂ ಮಧ್ಯಮ ನೀರಾವರಿ ಅಣೆಕಟ್ಟುಗಳ ಮೇಲೆ 75,100 ದಶಲಕ್ಷ ರೂಪಾಯಿಗಳನ್ನು ವ್ಯಯಿಸಿದೆ. ಹೀಗಿದ್ದೂ ಈ ಭಾರಿ ಹಣ ಹೂಡಿಕೆಯಿಂದ ಬಂದಿರುವ ಲಾಭಅಷ್ಟೇನೂ ಹೆಚ್ಚಿಲ್ಲ. ನೀರಾವರಿ ಭೂಮಿಯಿಂದ ಧಾನ್ಯದ ಇಳುವರಿಯೇನೂ ಹೆಚ್ಚಿಲ್ಲ. ಕಡಿಮೆ ನೀರು ಲಭ್ಯತೆ, ಭಾರಿ ಹೂಳು, ಕಡಿಮೆ ದಾಸ್ತಾನು ಸಾಮರ್ಥ್ಯ ಇತ್ಯಾದಿ ಸಮಸ್ಯೆಗಳಿಂದ ನೀರಾವರಿ ಯೋಜನೆಗಳಿಂದ ಆಗುತ್ತಿರುವ ವಾರ್ಷಿಕ ನಷ್ಟ ಹೆಚ್ಚಾಗಿದೆ. ಕರ್ನಾಟಕದ ಕಬಿನಿ ಯೋಜನೆ ಇದಕ್ಕೆ ಸೂಕ್ತ ಉದಾಹರಣೆ.

ಕಬಿನಿ ಯೋಜನೆಯಿಂದ 6,000 ಎಕರೆ ಭೂಮಿ

ಮುಳುಗಿದೆ. ಆದರೆ ಸ್ಥಳಾಂತರಗೊಂಡ ಗ್ರಾಮಗಳ ಪುನರ್ವಸತಿಗಾಗಿ ಜಲಾನಯನ ಪ್ರದೇಶಗಳಲ್ಲಿ 30-000 ಎಕರೆಯಷ್ಟು ಕಾಡು ಕಡಿಯಲಾಗಿದೆ. ಇದರಿಂದ ಸ್ಥಳೀಯ ಮಳೆ ಪ್ರಮಾಣ 60 ಇಂಚುಗಳಿಂದ 45 ಇಂಚುಗಳಿಗೆ ಕುಸಿದಿದೆ. ಭಾರಿ ಹೂಳು ಪ್ರಮಾಣ ಯೋಜನೆಯ ಬದುಕನ್ನೂ ಕುಂದಿಸಿದೆ. ಅಚ್ಚುಕಟ್ಟು ಪ್ರದೇಶದಲ್ಲಿ ಅಭಿವೃದ್ಧಿ ಹೊಂದಿದ ತೆಂಗು ತೋಪು ಹಾಗೂ ಬತ್ತದ ಗದ್ದೆಗಳು ನೀರು ನಿಲ್ಲುವಿಕೆ ಮತ್ತು ಜವುಳು ಸಮಸ್ಯೆಯಿಂದ ಹಾನಿಗೀಡಾಗಿದೆ. ನೀರಿನ ಲಭ್ಯತೆ ಅಥವಾ ನೀರಿನ ಹರಿವು ಸ್ಥಿರಗೊಳಿಸಲು ಉದ್ದೇಶಿಸಿದ ಯೋಜನೆಗಳಿಂದೆ ನೀರಿನ ಬಿಕ್ಕಟ್ಟು ಹೇಗೆ ಉಂಟಾಯಿತೆಂಬುದಕ್ಕೆ ಕಬಿನಿ ಯೋಜನೆಯ ಕಥೆ ಪ್ರಮುಖ ಉದಾಹರಣೆ.

**ಅಧ್ಯಾಯ-7 ಸ್ತ್ರೀತತ್ವದ ಪುನರ್ ಪ್ರತಿಪಾದನೆ**

ಸದ್ಯದ ಆರ್ಥಿಕ ಹಾಗೂ ಪರಿಸರ ಬಿಕ್ಕಟ್ಟಿಗೆ ಕಾರಣವಾಗಿರುವ ಪ್ರಬಲ ವಿಜ್ಞಾನ, ತಂತ್ರಜ್ಞಾನ ಹಾಗೂ ಅಭಿವೃದ್ಧಿ ಮಾದರಿಗಳ ಹಿಂದಿರುವ ತರ್ಕವನ್ನು ಈ ಅಧ್ಯಾಯ ಮತ್ತೆ ವಿವರಿಸುತ್ತದೆ. ಅಲ್ಲದೆ ಅಹಿಂಸಾತ್ಮಕವಾದ, ಲಿಂಗ ಭೇದವಿಲ್ಲದ. ಮಾನವೀಯವಾದ ಪರ್ಯಾಯವಾಗಿ ಸ್ತ್ರೀಯಾತ್ಮಕ ತತ್ವವನ್ನೂ ಇದು ಪುನರ್ ಪ್ರತಿಪಾದಿಸುತ್ತದೆ.

---

## ಸಾಕ್ಷಾತ್ಕಾರದ ಹಂಬಲ

ಹುಟ್ಟಿದ್ದೆ ನಿನಗಾಗಿ
ಬೆಳೆದೆ ನೀ ಬರೆದ ಚಿತ್ರವಾಗಿ
ಉಂಡದ್ದು, ಉಟ್ಟದ್ದು
ಆಡಿದ್ದು, ಅಟ್ಟಿದ್ದು
ನೀ ಬಯಸುವಂತೆಯೇ
ಕೊಟ್ಟಮೇಲೆ ಕುಲಕ್ಕೆ ಹೊರಗಾಗುವ ಹೆಣ್ಣು
ಹುಟ್ಟಿದಂದೆ ನ್ಯಾಸ
ಗೋಜಲುಗಳ ಮಧ್ಯೆ
ಉದ್ಭವಿಸಿತ್ತು ಪ್ರಶ್ನೆ
ನಾನಾರು ?
ಉತ್ತರಿಸಿದವರಿಲ್ಲ ಯಾರು.
ಕನ್ನಡಿಯಲ್ಲಿ ಕಂಡದ್ದೂ ಗುರುತಾಗದೇ ಹೋದಾಗ
ಅಂದೆ ನೀನು
ಕನ್ನಡಿಯು ಸುಳ್ಳು
ನೋಡು ಬಾ ನನ್ನ ಕಣ್ಣೊಳಗಿನ ಬಿಂಬ ನೀನು
ಈ ಬಿಂಬ ಡಿಂಬಗಳನ್ನೊಡೆದು
ನಾನೇ ನಾನಾಗುವ ಬಯಕೆ
ಉಕ್ಕಿ ಉಕ್ಕಿ ಬರುವಾಗ
ತಡೆಯ ಬಹುದಾವ ದಂಡೆ

— ಎಂ. ಎಚ್. ಲಕ್ಷ್ಮೀನರಸಮ್ಮ

# ಪ್ರಕೃತಿ ಪ್ರಜ್ಞೆ ಮತ್ತು ಹೆಣ್ಣು — ಒಂದು ಟಿಪ್ಪಣಿ

— ಸೀಮಂತಿನಿ ನಿರಂಜನ

ಆಧುನಿಕ ಭಾರತದ ಹಲವಾರು ಕ್ಷೇತ್ರಗಳಲ್ಲಿ ಇಂದು ಬಿಕ್ಕಟ್ಟಿನ ಪರಿಸ್ಥಿತಿ ತಲೆದೋರಿದೆ. ಒಂದೆಡೆ ಈ ಬಿಕ್ಕಟ್ಟು ರಾಜಕೀಯದೊಂದಿಗೆ ಬೆರೆತಿದ್ದರೆ, ಮತ್ತೊಂದೆಡೆಯಿಂದ ಸರಕಾರದ ಹೊಸ ಆರ್ಥಿಕ ನೀತಿ, ಧಾರ್ಮಿಕ ಮತ್ತು ಕೋಮುವಾದಿ ಸಂಘರ್ಷ ಇತ್ಯಾದಿಗಳಿಂದಾಗಿ ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿದೆ. ಇದಕ್ಕೆ ಕಾರಣ ಇಂಥದ್ದೇ ಎಂದು ಬೆರಳು ತೋರಿಸಿ ಗುರುತಿಸಲಾಗದಿದ್ದರೂ, ಪ್ರಗತಿಯ ಕನಸನ್ನು ತಲೆಯಲ್ಲಿ ತುಂಬಿಕೊಂಡು ಆಧುನಿಕವೂ ಅಲ್ಲದ ಸಾಂಪ್ರದಾಯಿಕವೂ ಅಲ್ಲದ ದೇಶ ಹೆಜ್ಜೆಗಳನ್ನಿಡಲು ಯತ್ನಿಸಿದಾಗ ಘಟಿಸಿದ ಅನಾಹುತವೆಂದು ಕರೆಯಬಹುದು. ವಾಸ್ತವವಾಗಿ, ಪ್ರಗತಿಯ ಕಲ್ಪನೆಯು 17-18ನೇ ಶತಮಾನಗಳ ಹೊತ್ತಿಗೆ ಐರೋಪ್ಯ ನೆಲದಲ್ಲಿ ಬೇರೂರಿದ್ದು, ಆ ದೇಶಗಳು ಹಮ್ಮಿಕೊಂಡ ಬಂಡವಾಳಶಾಹಿ ಪದ್ಧತಿ ಹಾಗೂ ಬೆಳವಣಿಗೆಯ ಮಾದರಿಗೆ ನೀರೆರೆಯಿತು. ಆ ರಾಷ್ಟ್ರಗಳ ಬೆಳವಣಿಗೆಗೆ ವಸಾಹತುಶಾಹಿ ಪದ್ಧತಿಯೂ ಸಹಾಯಕವಾಯಿತು ಎನ್ನುವುದಕ್ಕೆ ಇತಿಹಾಸವೇ ಸಾಕ್ಷಿ. ಇಂಥ ಐತಿಹಾಸಿಕ ಸಂದರ್ಭವು ಒದಗಿಸಿದ ರಾಜಕೀಯ-ಆರ್ಥಿಕ ಸಾಂಸ್ಕೃತಿಕ ಪ್ರಭಾವಗಳಿಗೆ ಮೈಯೊಡ್ಡಿದ ತೃತೀಯ ಜಗತ್ತಿನ ಅನೇಕ ರಾಷ್ಟ್ರಗಳು, ಸ್ವಾತಂತ್ರ್ಯವನ್ನು ಪಡೆದ ಬಳಿಕ, ಪಾಶ್ಚಾತ್ಯನೆಲೆಯ ಪ್ರಗತಿ-ಅಭಿವೃದ್ಧಿಯ ಮಾದರಿಗಳನ್ನು ತಮ್ಮ ಮುಂದಿಟ್ಟುಕೊಂಡವು: ಭಾರತವೂ ಇದಕ್ಕೆ ಹೊರತಾಗಿರಲಿಲ್ಲ. ಆರ್ಥಿಕ ಬೆಳವಣಿಗೆಯ ಗುರಿಗಳ ಸಾಧನೆಯಲ್ಲಿ ನಾವು ಎಷ್ಟರಮಟ್ಟಿಗೆ ಸಫಲವಾಗಿದ್ದೇವೆಂದು ಲೆಕ್ಕ ಹಾಕುವುದಾಗಲೀ, ಅಭಿವೃದ್ಧಿಯ ಕಲ್ಪನೆಯನ್ನು ಕುರಿತಾದ ಚರ್ಚೆಯಾಗಲೀ ಇಲ್ಲಿ ನನ್ನ ಉದ್ದೇಶವಲ್ಲ. ಕೈಗಾರೀಕರಣ, ನಗರೀಕರಣ ಹೆಚ್ಚಾದಂತೆ, ಅಭಿವೃದ್ಧಿಯ ಅಸಮಾನ ಸ್ವರೂಪ ವ್ಯಕ್ತವಾದಂತೆ, ಮತ್ತೊಂದು ಪ್ರಶ್ನೆ—ಪರಿಸರದ, ಪರಿಸರ ವಿನಾಶದ ಪ್ರಶ್ನೆ, ಪ್ರಕೃತಿ ಪ್ರಜ್ಞೆಯ ಪ್ರಶ್ನೆ ಪ್ರಾಮುಖ್ಯತೆ ಪಡೆಯಿತು. ಈ ಪ್ರಶ್ನೆಯ ಕೆಲವು ಆಯಾಮಗಳನ್ನು ಅದರಲ್ಲೂ, ಪರಿಸರ ಸಂರಕ್ಷಣೆಯ ಮಾತು ಬಂದಾಗಲೆಲ್ಲ ಹೆಣ್ಣಿನ ಪ್ರಸ್ತಾಪವನ್ನು ಮಾಡುವ ಪ್ರವೃತ್ತಿಯನ್ನು ಇಲ್ಲಿ ವಿಶ್ಲೇಷಿಸುತ್ತೇನೆ. ಪರಿಸರ ಮತ್ತು ಹೆಣ್ಣಿನ ನಡುವೆ ಹೀಗೆ ವಿಶೇಷ ಸಂಬಂಧ ಕಲ್ಪಿಸುವುದರ ಹಿಂದಿನ ಸತ್ಯವೇನು ? ಸರಕಾರಿ ಸಂಘ ಸಂಸ್ಥೆಗಳಿಂದ ಹಿಡಿದು, ಮಹಿಳಾ ಸಂಘಟನೆಗಳೂ ಸೇರಿದಂತೆ ಹಲವು ಪರ್ಯಾಯ ಸಂಸ್ಥೆಗಳವರೆಗೆ ಇದೇ ಕಲ್ಪನೆಯನ್ನು ತಮ್ಮ ಕಾರ್ಯಚಟುವಟಿಕೆಗಳ ಆಧಾರವಾಗಿರಿಸಿಕೊಂಡಿರುವುದನ್ನು ಕಂಡಾಗ ಕೆಲವು ಸಂದೇಹ, ಪ್ರಶ್ನೆಗಳು ಮುಂದಾಗುತ್ತವೆ. ಈ ಲೇಖನದಲ್ಲಿ ಇಂಥ ಸಂಶಯಗಳನ್ನು ಮುಂದಿಟ್ಟು, ಅವುಗಳನ್ನು ನಿವಾರಿಸಲು ನಮ್ಮ ಆಲೋಚನೆಯಲ್ಲಿ ಆಗಬೇಕಾದ ಬದಲಾವಣೆಗಳನ್ನು ಸಂಕ್ಷಿಪ್ತವಾಗಿ ಪ್ರಸ್ತಾಪಿಸುತ್ತೇನೆ.

ಬೆಳವಣಿಗೆ - ಅಭಿವೃದ್ಧಿಗಳ ಹೆಸರಿನಲ್ಲಿ ನಡೆದು ಹೋಗಿರುವ, ನಡೆಯುತ್ತಿರುವ ವಿನಾಶಕಾರಿ ಚಟುವಟಿಕೆಗಳ ಬಗ್ಗೆ ತೀವ್ರ ವಿರೋಧ ವ್ಯಕ್ತಪಡಿಸಿ, ಹಾಗಾಗದಂತೆ ಎಚ್ಚರವಹಿಸುವುದು ಪರಿಸರ ಸಂರಕ್ಷಣವಾದಿಗಳ ಮುಖ್ಯ ಉದ್ದೇಶಗಳು. ಆಧುನಿಕ ವಿಜ್ಞಾನ, ತಂತ್ರಜ್ಞಾನದ ಸಹಾಯದಿಂದ ಪ್ರಕೃತಿ ಸಂಪತ್ತಿಗೆ ಲಗ್ಗೆ ಹಾಕಿ, ಅದನ್ನು ಸಂಪೂರ್ಣವಾಗಿ ತನ್ನ ಆಧೀನಕ್ಕೊಳಗಾಗಿಸಿರುವುದು ಆರ್ಥಿಕ ಅಭಿವೃದ್ಧಿ ಮಾದರಿಯ ಸ್ವರೂಪವಾಗಿದೆ. ಇಂಥ ಬೇಜವಾಬ್ದಾರಿಯುತ ಬೆಳವಣಿಗೆಯಿಂದ ಪರಿಸರದ ಮೇಲೆ ಉಂಟಾಗಿರುವ ಘೋರ ಪರಿಣಾಮಗಳನ್ನು ಬೆಳಕಿಗೆ ತಂದು, ಸಾಧ್ಯವಾದರೆ ಅದನ್ನು ತಡೆಗಟ್ಟುವುದು ವಿಶ್ವದಾದ್ಯಂತ ಪರಿಸರವಾದಿಗಳ ಪ್ರಮುಖ ಕಾಳಜಿ. ಸ್ಪಷ್ಟವಾಗಿ ವ್ಯಕ್ತಪಟ್ಟಿಲ್ಲದಿದ್ದರೂ ಈ ನಿಲುವಿನ ಹಿಂದೆ ಕೆಲವು ಪೂರ್ವಾಗ್ರಹಗಳಿವೆ. ಇವುಗಳಲ್ಲಿ ಒಂದನ್ನು ಮಾತ್ರ ತೆಗೆದುಕೊಂಡು, ಆ ಮೂಲಕ 'ಸ್ತ್ರೀ-ಪ್ರಕೃತಿ'ಯ ಜೋಡಣೆಯನ್ನೂ ಹೇಗೆ ಅರ್ಥೈಸಬಹುದು ಎಂದು ಸೂಚಿಸುತ್ತೇನೆ. ಆಧುನಿಕತೆ, ಹೆಚ್ಚುತ್ತಿರುವ ನಗರೀಕರಣ

ಇದರಿಂದ ಉದ್ಭವಿಸುವ ಸಮಸ್ಯೆಗಳ ಹಿನ್ನೆಲೆಯಲ್ಲಿ ಗ್ರಾಮೀಣ ಬದುಕಿನ ಘನತೆ ಮತ್ತು ಸರಳತೆಯ ಗುಣಗಾನವನ್ನು ಹಲವು ಸನ್ನಿವೇಶಗಳಲ್ಲಿ ಮಾಡಲಾಗಿದೆ. ಪರಿಸರವಾದಿಗಳಲ್ಲೂ ಈ ಆಲೋಚನಾಸರಣಿಯ ಛಾಯೆ ಕಾಣಬಹುದು. 'ಅಭಿವೃದ್ಧಿಯ ಪ್ರಕ್ರಿಯೆಯ ಅಂಚಿಗೆ ದೂಡಲ್ಪಟ್ಟ ಗ್ರಾಮ್ಯ ಜನರ ಬದುಕು, ಅಂತಹ ಯೋಜನೆಗಳ ಟೊಳ್ಳುತನವನ್ನು ಬಹಿರಂಗಪಡಿಸುವುದರ ಜತೆಗೇ, ಅದರ ಅಪ್ರಸ್ತುತತೆಯನ್ನೂ ಸ್ಪಷ್ಟಪಡಿಸುತ್ತದೆ. ಹೀಗಿದ್ದೂ ಗ್ರಾಮಸ್ಥರು ಪ್ರಕೃತಿ - ಭೂಮಿಯೊಂದಿಗಿನ ನಿಕಟ ಸಂಬಂಧದಿಂದಾಗಿ ತಮ್ಮ ಸ್ವಾವಲಂಬನೆಯನ್ನು ಉಳಿಸಿಕೊಂಡಿದ್ದಾರೆ'– ಎನ್ನುವುದು ಇಂಥ ಚಿಂತನೆಯ ಒಂದು ಮಾದರಿ. ಆದರೆ, ಹಲವು ದಿಶೆಗಳಿಂದ ಧಾಳಿಗೊಳಗಾಗಿ ಈ ಜೀವನಾಧಾರವೇ ನಾಶವಾಗುತ್ತಿರುವ ಇತ್ತೀಚಿನ ದಿನಗಳಲ್ಲಿ ಮೇಲಿನಂತಹ ಚಿತ್ರಗಳು ಗ್ರಾಮ್ಯ ಬದುಕನ್ನು ಐಡಿಯಲೈಸ್ ಮಾಡುತ್ತವೇ ಹೊರತು, ವಸ್ತುಸ್ಥಿತಿಯ ನೈಜ ಚಿತ್ರಣ ನೀಡುತ್ತಿವೆಯೆಂದು ಭಾವಿಸಲು ಸಾಧ್ಯವಿಲ್ಲ. ಗ್ರಾಮ್ಯ ಜೀವನವನ್ನು ಕುರಿತಾದ ಪೂರ್ವಾಗ್ರಹದ ಜತೆಗೇ ಮತ್ತೊಂದು ಮುಖ್ಯವಾದ ಕಲ್ಪನೆ ಭೂಮಿ ತಾಯಿಯ ಗುಣಗಾನದಲ್ಲಿ ಅಡಕವಾಗಿರುವ ಹೆಣ್ಣಿನ ಪ್ರಸ್ತಾಪ - ಬೆರೆತಿರುವುದನ್ನು ಗಮನಿಸಬಹುದು. ಹೇಗೆ ಭೂಮಿಯನ್ನು 'ಫಲವತ್ತಾದ ಕ್ಷೇತ್ರ'ವೆಂದು ವರ್ಣಿಸಲಾಗಿದೆಯೋ, ಹೆಣ್ಣನ್ನೂ ಅದೇ ಉಪಮೆಯ ಸಹಾಯದಿಂದ ಮೂರ್ತಿಸಲಾಗಿದೆ. 'ಭೂಮಿ-ಪ್ರಕೃತಿ-ಶಕ್ತಿ-ಹೆಣ್ಣು' ಇವೆಲ್ಲ ಒಂದೇ ಸೂತ್ರದ ಅಂಶಗಳು ಎಂಬ ಅಭಿಪ್ರಾಯವೂ ಇದೇ ನೆಲೆಯಿಂದ ಮೂಡಿಬಂದಿದೆ.

ಪ್ರಕೃತಿ - ಸ್ತ್ರೀ ನಡುವೆ ಸ್ಥಾಪಿಸಲಾಗಿರುವ ಈ ಕೊಂಡಿಯೇ ಪರಿಸರವಾದ ಹಾಗೂ ಇಕೋ - ಸ್ತ್ರೀವಾದದ ನಡುವಿನ ಬಾಂಧವ್ಯಕ್ಕೆ ಆಧಾರ. ಕಾಲ-ದೇಶ, ಜಾತಿ ಜನಾಂಗ, ವರ್ಗ, ಇತಿಹಾಸ, ಸಂಸ್ಕೃತಿ, ಸಂಪ್ರದಾಯ- ಇವುಗಳ ನಡುವಿನ ಭಿನ್ನತೆಯನ್ನು ಲೆಕ್ಕಿಸದೆ, ಇಕೋ-ಫೆಮಿನಿಸಂ ಪ್ರಕೃತಿ - ಸ್ತ್ರೀ ಸಮೀಕರಣವನ್ನು ಸಮನಾಗಿ ಕಾಣುತ್ತದೆ. ಇದರ ಜತೆಗೇ, ಪ್ರಕೃತಿ - ಸ್ತ್ರೀ ಎಂಬ ಕಲ್ಪನೆಗೆ ವಿರುದ್ಧವಾಗಿ, ಸಂಸ್ಕೃತಿ - ಪುರುಷ ಎಂಬ ಪರ್ಯಾಯ ದ್ವಿತ್ವಾತ್ಮಕ ಕಲ್ಪನೆಯನ್ನು ನಿರ್ಮಿಸಲಾಗಿದೆ. ಪ್ರಕೃತಿಯನ್ನು ಮನುಷ್ಯ ಹೇಗೆ ಸಂಸ್ಕೃತಿಯ (ಅಂದರೆ, ವಿಜ್ಞಾನ-ತಂತ್ರಜ್ಞಾನದ) ಮೂಲಕ ತನ್ನ ಅಧೀನದಲ್ಲಿಟ್ಟಿದ್ದಾನೋ, ಹಾಗೆಯೇ ಸ್ತ್ರೀ-ಪುರುಷ ಸಂಬಂಧದಲ್ಲೂ ದಬಾವಣೆಯ ರೂಪುರೇಷ ಇದ್ದೇ ಇದೆ ಎನ್ನುವುದು ಈ ಹೋಲಿಕೆಯ ಬುನಾದಿ. ಇಕೋ-ಫೆಮಿನಿಸಂ ಮಾತ್ರವಲ್ಲ, ಬಹುಪಾಲು ಪಾಶ್ಚಾತ್ಯ ಚಿಂತನಾ ಮಾದರಿಗಳಲ್ಲಿ ಪುರುಷ-ಸಂಸ್ಕೃತಿ, ಸ್ತ್ರೀ-ಪ್ರಕೃತಿಯಂತ ಚೌಕಟ್ಟುಗಳೊಳಗೆ ಲಿಂಗಾಧಾರಿತ ಸಂಬಂಧಗಳನ್ನು ವಿಶ್ಲೇಷಿಸಲಾಗಿದೆ. ಪ್ರಕೃತಿಯಲ್ಲಿನ ಸೃಷ್ಟಿ ಪ್ರಕ್ರಿಯೆಯಂತೆಯೇ ಮಕ್ಕಳನ್ನು ಹೆರುವ ಹೆಣ್ಣಿನ ಜೈವಿಕ ಕ್ರಿಯೆಯನ್ನು 'ಸಹಜ'ವೆಂದು ಪರಿಗಣಿಸಿರುವುದರಿಂದಲೇ ಸಾಂಸ್ಕೃತಿಕ ವಲಯದಲ್ಲಿ 'ಸೃಷ್ಟಿ' ಮಾಡುವ ಪುರುಷನಿಗಿಂತ ಆಕೆ ಭಿನ್ನ ಮಾತ್ರವಲ್ಲ ಕೀಳಂತಲೂ ಕಾಣಲಾಗಿದೆ. 1970ನೇ ದಶಕದಲ್ಲಿ ಕೆಲವು (ಪಾಶ್ಚಾತ್ಯ) ಸ್ತ್ರೀವಾದಿ ಮಾನವಶಾಸ್ತ್ರಜ್ಞರು ಕೂಡ "ಹೆಣ್ಣಿನ ದೇಹ ಅವಳನ್ನು ಪ್ರಕೃತಿಗೆ ಹೆಚ್ಚು ಸಮೀಪ ತರುತ್ತದೆ; ಜತೆಗೇ, ಅವಳ ಸಮಾಜಿಕ ಅಂತಸ್ತು ಹಾಗೂ ಮಾನಸಿಕ ಪರಿಸ್ಥಿತಿ - ಭಾವನೆಗಳ ಮೇಲೆ ಈ "ಸಹಜ ಶಾರೀರಿಕ ಕ್ರಿಯೆ'ಯ ಪ್ರಭಾವ ಬೀರುತ್ತದೆ" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಅನಂತರ ಈ ಆಲೋಚನೆಯಲ್ಲಿ ತಿದ್ದುಪಡಿಗಳನ್ನು ಅಳವಡಿಸಲಾಯಿತು. ಹೆಣ್ಣನ್ನು ಸಂಪೂರ್ಣವಾಗಿ ಆಕೆಯ ದೈಹಿಕ ಕ್ರಿಯೆಗಳ ದೃಷ್ಟಿಕೋನದಿಂದಲೇ ಅರ್ಥೈಸದಿದ್ದರೂ ಅಲ್ಲಿ ಕೂಡಾ ಸ್ತ್ರೀ-ಪ್ರಕೃತಿಯ ನಡುವೆ ಏರ್ಪಟ್ಟಿರುವ ಸಾಮ್ಯ ಮತ್ತು ನಿಕಟ ಸಂಬಂಧವನ್ನು ಗಮನಿಸಬಹುದು. ಈ ಪ್ರಚಲಿತ ವಾದವನ್ನು ಇತರ ಸ್ತ್ರೀವಾದಿಗಳು ಸ್ವೀಕರಿಸುವ ಅಥವಾ ನಿರಾಕರಿಸುವ ಹಲವು ವಿಧಾನಗಳು ಅವರ ಆಲೋಚನೆಯ ಭಿನ್ನತೆಯಲ್ಲಿ ಪ್ರತಿಫಲನಗೊಂಡಿದೆ.

ಪ್ರಕೃತಿ/ಜೈವಿಕ ಕ್ರಿಯೆಗಳೊಂದಿಗಿನ ಅವಳ ಸಮೀಕರಣವನ್ನು ಪ್ರಶ್ನಿಸಬೇಕು ; ಆ ಮೂಲಕ ಆಕೆ ಒಳಗಾಗಿರುವ ದಬ್ಬಾಳಿಕೆಯಿಂದಲೂ ವಿಮುಕ್ತಿ ಪಡೆಯಬಹುದು ಎಂಬುದು ಒಂದು ನಿಲುವು. ಆದರೆ, ಗೊಂದಲಗಳನ್ನು ಅಷ್ಟೊಂದು ಸುಲಭವಾಗಿ ಪರಿಹರಿಸಲಾಗಲಿಲ್ಲ. ಸ್ತ್ರೀ-ಪುರುಷ ಸಂಬಂಧಗಳನ್ನು ಹೆಚ್ಚಾಗಿ 'ಪ್ರಕೃತಿ–ಸಂಸ್ಕೃತಿಯ ಧ್ರುವೀಕೃತ ವಿಶ್ಲೇಷಣಾ ಚೌಕಟ್ಟಿನೊಳಗೇ ವಿವರಿಸುತ್ತಾ ಬರಲಾಗಿದೆ ಎಂದು ಹೇಳಿದನಷ್ಟೇ. ಹಾಗಾದರೆ, ಪ್ರಕೃತಿಯೊಂದಿಗಿನ ಹೋಲಿಕೆಯನ್ನು ತಪ್ಪಿಸ ಬಯಸಿದರೆ, ಹೆಣ್ಣು ವಾಲುವುದು ದಬ್ಬಾಳಿಕೆಯನ್ನಾಧರಿ

ಸಿದ ಪುರುಷ ಸ್ಥಾಪಿತ 'ಸಂಸ್ಕೃತಿಯ' ಕ್ಷೇತ್ರಕ್ಕೇ ? ಎಂಬ ಪ್ರಶ್ನೆಯನ್ನು ಸ್ತ್ರೀವಾದಿಗಳು ಎದುರಿಸಬೇಕಾಯಿತು. ಇದಕ್ಕೆ ಉತ್ತರವೆಂಬಂತೆ ಇಕೋ–ಫೆಮಿನಿಸಂ ತನ್ನ ವಾದವನ್ನು ಮುಂದಿಟ್ಟಿತು : ಸ್ತ್ರೀ-ಪ್ರಕೃತಿಯ ನಡುವಿನ ಹೋಲಿಕೆಯನ್ನು ವಿರೋಧಿಸಿ, 'ಪುರುಷ ನಿರ್ದೇಶಿತ ಸಂಸ್ಕೃತಿ'ಯನ್ನು ಸೇರುವ ಬದಲು, ಹೆಣ್ಣು-ನಿಸರ್ಗದ ಸಮೀಕರಣವನ್ನು ಆಧಾರವಾಗಿಟ್ಟುಕೊಂಡು, ಹೊಸ ಬಗೆಯ ಸಂಸ್ಕೃತಿ, ಸಂಬಂಧಗಳನ್ನು ಸ್ಥಾಪಿಸಬೇಕು. ಅಂದರೆ, ಸಮೀಕರಣವನ್ನು ಒಪ್ಪಿಕೊಂಡರೂ ಅದಕ್ಕೆ ಹೊಸ ಅರ್ಥವನ್ನು ನೀಡಲು ಇಕೋ-ಫೆಮಿನಿಸಂ ಪ್ರಯತ್ನಿಸಿತು.

ಭಾರತದ ಸಂದರ್ಭದಲ್ಲಿ ಈ ಸಂಬಂಧವನ್ನು ಕಲ್ಪಿಸಿರುವರೀತಿಗೆ ಬಹುಶಃ ವಂದನಾ ಶಿವಾ ಅವರ ಕೃತಿ 'ಸ್ಟೇಯಿಂಗ್ ಅಲೈವ್' ಸೂಕ್ತ ಉದಾಹರಣೆಯಾಗಬಹುದು. ಇದು ಪ್ರತಿನಿಧಿಸುವ ಚಿಂತನೆಯನ್ನು ಕೆಲವು ಮೂಲಭೂತ ಸೂತ್ರಗಳ ಸುತ್ತ ಹೆಣೆಯಲಾಗಿದೆ ;

1) ಹೆಣ್ಣು-ಪ್ರಕೃತಿಯ ನಡುವಿನ ಸಾಮ್ಯದ ಮೊಟ್ಟ ಮೊದಲ ಹಂತ–ಇವೆರಡೂ ಸ್ತ್ರೀ ಎನ್ನುವುದು.

2) ಸೃಷ್ಟಿಯಲ್ಲಿ ಮತ್ತು ಬದುಕನ್ನು ಸಂರಕ್ಷಿಸುವುದರಲ್ಲಿ ಎರಡೂ ಮುಖ್ಯ ಪಾತ್ರ ವಹಿಸುವ ಶಕ್ತಿಗಳು.

3) ಎರಡೂ ದಬ್ಬಾಳಿಕೆಗೆ ಒಳಗಾದ ಕ್ಷೇತ್ರಗಳು– ಪುರುಷರ ಕೈಯಲ್ಲಿ, ಅಭಿವೃದ್ಧಿಯ ಹೆಸರಿನಲ್ಲಿ ಹೆಣ್ಣು– ಪ್ರಕೃತಿ ಎರಡೂ ಸ್ತ್ರೀ, ಆದ್ದರಿಂದ ದಬ್ಬಾಳಿಕೆಗೆ ಒಳಗಾಗಿವೆ ಎನ್ನುವ ಸುತ್ತುವಾದವನ್ನು ಇಲ್ಲಿ ಇದಿರಿಸುತ್ತಿದ್ದೇವೆಯೇ ಹೊರತು, ಇವೆರಡರ ನಡುವಿನ ನಿಜವಾದ ಸಂಬಂಧ ಏನೆಂಬ ವಿಶ್ಲೇಷಣೆಯಿಲ್ಲ. ಇವೆರಡೂ ಸಹಜ ಪ್ರಕ್ರಿಯೆಗಳಿಂದ ಕೂಡಿದ ಕ್ಷೇತ್ರಗಳು ಎಂಬ ಸರಳೀಕರಣದಿಂದಾಗಿ, ಬೇರೆ ಬೇರೆ ಕಾಲಗಳಲ್ಲಿ, ಬೇರೆ ಬೇರೆ ಸಂಸ್ಕೃತಿಗಳಲ್ಲಿ ಹೆಣ್ಣು ಮತ್ತು ನಿಸರ್ಗವು ಪಡೆಯುವ ಭಿನ್ನ ಅರ್ಥಗಳ ಮೇಲೆ ಮುಸುಕು ಎಳೆದುಬಿಡುತ್ತೇವೆ. ಇಲ್ಲಿ ಇನ್ನೊಂದು ಅಂಶವನ್ನು ನಾವು ಗಮನಿಸಬೇಕು. ವಂದನಾ ಶಿವಾ ಅವರ ಪ್ರಕಾರ, ಎಲ್ಲ ಅಭಿವೃದ್ಧಿ ಮಾದರಿಗಳು ಪ್ರಕೃತಿಯನ್ನು (ಹಾಗೆಯೇ ಹೆಣ್ಣನ್ನು) ನಡೆಸಿಕೊಳ್ಳುವ ರೀತಿಯಲ್ಲಿ, ದಬ್ಬಾಳಿಕೆಯ ಮನೋಭಾವ ಮತ್ತು ದರೋಡೆಕಾರಿ ಪ್ರವೃತ್ತಿ ಇದ್ದೇ ಇದೆ. ಆದರೂ ದಬಾವಣೆಯನ್ನು ಹೆಂಗಸು ಮೂಕಳಾಗಿ ಸಹಿಸದೆ, ಪ್ರಕೃತಿಯನ್ನು (ಆ ಮೂಲಕ ತನ್ನನ್ನೂ ರಕ್ಷಿಸಿಕೊಳ್ಳುವುದರಲ್ಲಿ ಸಕ್ರಿಯ ಪಾತ್ರವಹಿಸುತ್ತಿದ್ದಾಳೆ. ಸ್ತ್ರೀ–ಪ್ರಕೃತಿ–ಶಕ್ತಿಗಳ ಈ ಸಮಾಗಮವು ಹೊಸ ಸ್ತ್ರೀ ಸೂತ್ರದ ಸಾಧ್ಯತೆಗಳನ್ನು ನಿಜವಾಗಿಸಿದ್ದು, ಹೆಣ್ಣನ್ನು ಪುರುಷನಿಗಿಂತ ಉತ್ಕೃಷ್ಟ ಸ್ಥಾನದಲ್ಲಿರಿಸಿದೆ. ಪರಸ್ಪರ ನಂಬಿಕೆ, ಅವಲಂಬನೆ, ಪೋಷಣೆ, ಭಿನ್ನತೆಯ ರಕ್ಷಣೆ ಹಾಗೂ ಹೆಚ್ಚಿನ ಪರಿಪೂರ್ಣತೆ ಇಂಥ ಸೂತ್ರದ ಮುಖ್ಯ ಲಕ್ಷಣಗಳು. ಇಕೋ - ಸ್ತ್ರೀವಾದವು ಮುಂದಿರಿಸಿರುವ ಸ್ತ್ರೀ-ಪ್ರಕೃತಿ-ಶಕ್ತಿಗಳ ಸಮೀಕರಣವು ಅಭಿವೃದ್ಧಿ ಮಾದರಿಗಳ ವಿರುದ್ಧ ವಾದಿಸುವುದರಲ್ಲೇನೋ ಉಪಯುಕ್ತ. ಆದರೆ, ಸ್ತ್ರೀವಾದ / ಪರಿಸರವಾದಗಳಂತಹ ಪರ್ಯಾಯ ಧಾರೆಯಂತೆಯೇ, ಸರ್ಕಾರ ಹಾಗೂ ಸರ್ಕಾರೇತರ ಅಭಿವೃದ್ಧಿ-ಪರವಾದ ಚಟುವಟಿಕೆಗಳಲ್ಲೂ ಇದೇ ಚಿಂತನೆ, ಇದೇ ಮಹಿಳೆ - ಪ್ರಕೃತಿಯ ಸಮಾನತೆಯ ಮಾತು ಕೇಳಿಸಿದಾಗ ಕಸಿವಿಸಿಯಾಗುತ್ತದೆ. ಇದು ಸುಲಭವಾಗಿ ಪರಿಹರಿಸಬಲ್ಲ ಕಸಿವಿಸಿಯಲ್ಲ. ಎರಡೂ ವಲಯಗಳಲ್ಲಿ ಸ್ತ್ರೀ - ಪ್ರಕೃತಿ ಸಂಬಂಧವನ್ನು ಒಂದೇ ರೀತಿ ಕಂಡಿರುವುದರ ಅರ್ಥವೇನು ? ಆ ಪರಿಗಣನೆಯ ಹಿಂದಿನ ಸತ್ಯ ಎಷ್ಟು ? ಜನಪ್ರಿಯತೆ ಗಳಿಸುತ್ತಿರುವ ಈ ಚಿಂತನಾಶೈಲಿಯ ಹಿಂದೆ ಹೊಕ್ಕರೂ, ಬಿಡಿಸಲು ಸಿಗುವ ಸಂದಿಗ್ಧಗಳೆಷ್ಟು, ಒಗಟಾಗಿಯೇ ಉಳಿಯುವ ಗಂಟುಗಳೆಷ್ಟು ?

ನನ್ನ ಅಭಿಪ್ರಾಯದಲ್ಲಿ, ಹಲವು ಕಾರಣಗಳಿಂದಾಗಿ ಸ್ತ್ರೀ-ಪ್ರಕೃತಿಯ ನಡುವಿನ ಸಂಬಂಧವನ್ನು ಇದ್ದದ್ದು ಇದ್ದ ಹಾಗೇ ಒಪ್ಪಿಕೊಳ್ಳುವುದು ಸಾಧ್ಯವಾಗದ ಮಾತು. ಪ್ರಕೃತಿ-ಪರಿಸರದ ರಕ್ಷಣೆಯನ್ನು ಹೆಂಗಸರು ನಿಜವಾಗಿಯೂ ಎಷ್ಟರ ಮಟ್ಟಿಗೆ ಮಾಡುತ್ತಾರೆ? ಎಲ್ಲ ಹೆಂಗಸರೂ ಸಂರಕ್ಷಣೆಯ ಕಾರ್ಯದಲ್ಲಿ ಸಮಾನ ಆಸಕ್ತಿ ವಹಿಸುವರೇ ? ಬೇರೆ ಬೇರೆ ಸಮಾಜಗಳ ಹೆಂಗಸರ ಮಾತು ಹಾಗಿರಲಿ, ನಮ್ಮ ದೇಶದಲ್ಲೇ ನಗರವಾಸಿ ಹೆಂಗಸರಿಗೆ ಪರಿಸರದ ವಿಷಯದಲ್ಲಿ ಗ್ರಾಮೀಣ ಮತ್ತು ಗುಡ್ಡಗಾಡು ಹೆಂಗಸರಷ್ಟು ನಿಕಟ ಸಂಪರ್ಕವಾಗಲಿ, ಅದರ ಸಂರಕ್ಷಣೆಯ ಕಾಳಜಿಯಾಗಲಿ ಇದೆಯೇ ? ಇರಲು ಸಾಧ್ಯವೇ ? ಇನ್ನೂ ಕೂಲಂಕಷವಾಗಿ ಶೋಧಿಸಿದರೆ, ಗ್ರಾಮೀಣ ಹೆಂಗಸರಲ್ಲೇ ಎಷ್ಟೊಂದು ಭಿನ್ನತೆಗಳಿವೆಯಲ್ಲ ! ಭೂಮಾಲಿಕರ ಮನೆಯ ಹೆಣ್ಣು ಮತ್ತು ತೀರಾ

ಕುಟುಂಬಕ್ಕೆ ಸೇರಿದ ಹೆಂಗಸು ಒಂದೇ ದೃಷ್ಟಿಯಿಂದ ಪರಿಸರವನ್ನು ಕಾಣುವರೇ ? ಹೆಂಗಸರಲ್ಲೇ ಇಷ್ಟೆಲ್ಲ ಭಿನ್ನತೆಗಳಿರುವಾಗ, ಪ್ರಕೃತಿಗೂ–ಸ್ತ್ರೀಗೂ ವಿಶೇಷ ಸಂಬಂಧವಿದೆ, ಪರಿಸರದ ರಕ್ಷಣೆಯಲ್ಲಿ ಆಕೆ ಎಲ್ಲಿಲ್ಲದ ಆಸಕ್ತಿ ವಹಿಸುತ್ತಾಳೆ ಎಂದು ಹೇಗೆ ಹೇಳುವುದು ? ಸಿಸಿಲ್‌ಜ್ಯಾಕ್ಸನ್ ಅವರು ತಮ್ಮ ಲೇಖನದಲ್ಲಿ 'ಈ ಸಮಸ್ಯೆಗೆ ಉಧಾಹರಣೆಯಾಗಿ ಸ್ತ್ರೀ ಮತ್ತು ಅಭಿವೃದ್ಧಿ ಕಾರ್ಯಗಳಿಗೆ ಸಂಬಂಧಿಸಿದ ವರದಿಯೊಂದನ್ನು ಉಲ್ಲೇಖಿಸುತ್ತಾರೆ : ಅದರ ಪ್ರಕಾರ, ಮರುಭೂಮಿ ಪ್ರದೇಶಗಳು ವಿಸ್ತರಿಸದಂತೆ ಕೈಗೊಂಡ ಅಭಿವೃದ್ಧಿ ಕಾರ್ಯವೊಂದರಲ್ಲಿ ಕೆಲಸಗಾರರಿಗೆ ವೇತನದ ಬದಲು ಆಹಾರವನ್ನು ನೀಡಲಾಗುತ್ತಿತ್ತು. ಇಲ್ಲಿ ಕೆಲಸ ಮಾಡುತ್ತಿದ್ದ ವ್ಯಕ್ತಿಗಳೆಲ್ಲರೂ ಹೆಂಗಸರಾಗಿದ್ದರು. ಇದನ್ನಷ್ಟೇ ಗಮನಿಸಿ, ಹೆಂಗಸರು ಪರಿಸರಕ್ಕೆ ಹೆಚ್ಚು ಬದ್ಧರಾದ್ದರಿಂದ ಈ ಕೆಲಸಕ್ಕೆ ಹಾಜರಾದರು ಎಂದು ತೀರ್ಮಾನಿಸುವುದು ಮೂರ್ಖತನವಾಗುತ್ತದೆ. ಸ್ವಲ್ಪ ಯೋಚಿಸಿದಾಗ, ಪುರುಷರಿಗಿಂತ ಹೆಂಗಸರ ಮೇಲೆಯೇ ಬಡತನದ ಒತ್ತಡ ಹೆಚ್ಚಾಗಿರುವುದರಿಂದ, ಹೆಂಗಸರೇ ಅಧಿಕ ಸಂಖ್ಯೆಯಲ್ಲಿ ಆಹಾರಕ್ಕಾಗಿಯೇ ದುಡಿಯಲು ತಯಾರಾಗಿರುತ್ತಾರೆ ಎನ್ನುವುದು ಸ್ಪಷ್ಟವಾಗುತ್ತದೆ. ಹೀಗೆ ಹೆಣ್ಣು ಸಹಜವಾಗಿ ಪೋಷಕ ಮನೋಭಾವವನ್ನು ಹೊಂದಿರುತ್ತಾಳೆ, ಮುಂಬರುವ ಪೀಳಿಗೆಗಳಿಗೆ ಪರಿಸರವನ್ನು ಸಂರಕ್ಷಿಸುವುದರಲ್ಲಿ ತೊಡಗಿದ್ದಾಳೆ ಎಂದು ಹೇಳುವುದೂ ತಪ್ಪಾಗಬಹುದು. ಹಾಗೆಯೇ ಗಣಿಗೆಲಸ, ಮರ ಕಡಿಯುವ, ಸಾಗಿಸುವ ಉದ್ಯೋಗಗಳಲ್ಲಿ ಮಹಿಳೆಯರ ಸಂಖ್ಯೆ ತೀರಾ ಕಡಿಮೆ. ಇದಕ್ಕೆ ಕಾರಣ ಪರಿಸರದ ಬಗೆಗಿನ ಅವರ ಕಾಳಜಿ ಎನ್ನುವುದಕ್ಕಿಂತ, ಅವರಿಗೆ ಸಿಗುವ ಅಥವಾ ಸಿಗದ ಉದ್ಯೋಗ ಅವಕಾಶಗಳು ಎಂದು ಹೇಳಬೇಕಾಗುತ್ತದೆ.

ಮತ್ತೊಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. ಚಿಪ್ಕೊ ಚಳವಳಿಯ ಸಂದರ್ಭದಲ್ಲಿ ಹೆಂಗಸರ ಉತ್ಸಾಹ ಮತ್ತು ಪರಿಸರ ಬದ್ಧತೆ ಬಹಳ ಮುಖ್ಯ ಪಾತ್ರ ವಹಿಸಿತು ಎನ್ನುವ ಮಾತನ್ನು ನಾವೆಲ್ಲ ಕೇಳಿಯೇ ಇದ್ದೇವೆ. ಈ ಚಳವಳಿಯನ್ನು ಹೇಗೆ ಅರ್ಥೈಸಬೇಕೆಂಬುದರ ಬಗ್ಗೆ ಕಳೆದ ಕೆಲವು ವರ್ಷಗಳಲ್ಲಿ ಹೊಸ ಚಿಂತನೆ ಏರ್ಪಟ್ಟಿದೆ. ನಿಸರ್ಗ ಮತ್ತು ಹೆಣ್ಣುತನದ ಸಾಮ್ಯದ ದೃಷ್ಟಿಯಿಂದ ವಿಶ್ಲೇಷಿಸುವುದಕ್ಕಿಂತ, ಆ ಪ್ರದೇಶದ ಸಂಸ್ಕೃತಿ, ಚರಿತ್ರೆ, ಆರ್ಥಿಕ ವ್ಯವಸ್ಥೆ, ಇತ್ಯಾದಿಗಳ ಹಿನ್ನೆಲೆಯಲ್ಲಿ ಚಳವಳಿಯನ್ನು ಚರ್ಚಿಸುವುದು ಹೆಚ್ಚು ಪ್ರಸ್ತುತ ಎನ್ನುವುದು ರಾಮಚಂದ್ರ ಗುಹಾ ಅವರ ವಾದ. ಶೋಭಿತಾ ಜೈನ್ ಅವರು ಕೂಡ ಚಿಪ್ಕೋ ಆಂದೋಲನದಲ್ಲಿ ಸ್ತ್ರೀವಾದಿ ಚಳವಳಿಯ ಛಾಯೆಯನ್ನು ಗುರುತಿಸಲು ನಿರಾಕರಿಸುತ್ತಾರೆ : ವಿರೋಧಾತ್ಮಕ ಚಳವಳಿಗಳಲ್ಲಿ ಭಾಗವಹಿಸುವುದು ಆ ಪ್ರದೇಶದ ಹೆಂಗಸರಿಗೇನು ಹೊಸ ವಿಷಯವಾಗಿರಲಿಲ್ಲ. ಇವರಲ್ಲಿ ಹಲವರು 1960ರಲ್ಲಿ ನಡೆದ ಮದ್ಯಪಾನ ನಿಷೇದ ಚಳವಳಿಯಲ್ಲಿ ಪಾಲ್ಗೊಂಡಿದ್ದರು. ಹೀಗಾಗಿ, ಮರಗಳನ್ನು ಅಪ್ಪಿ ಹಿಡಿಯುವ ಚಿಪ್ಕೋ ತಂತ್ರದಲ್ಲಿ ಹೆಂಗಸರೇ ಅಧಿಕ ಸಂಖ್ಯೆಯಲ್ಲಿ ಭಾಗವಹಿಸಿದರೂ, ಚಳವಳಿಯ ಮುಂದಾಳುತನದಲ್ಲಿ ಪುರುಷರದ್ದೇ ಆಗಿತ್ತೆಂದು ಮರೆಯಬಾರದೆಂದು ಎಚ್ಚರಿಸುತ್ತಾರೆ. ಚಿಪ್ಕೋ ಆಂದೋಲನವು ವ್ಯಾಪಾರೀ ಉದ್ದೇಶಗಳಿಗಾಗಿ ಅರಣ್ಯ ಸಂಪತ್ತನ್ನು ಕಬಳಿಸುವ ಶಕ್ತಿಗಳ ವಿರುದ್ಧವಾಗಿದ್ದು, ಅದುವರೆಗೂ ನಡೆಯುತ್ತಾ ಬಂದಿದ್ದ ಪರಸ್ಪರ ನಂಬಿಕೆಯನ್ನಾಧರಿಸಿದ ಸಂಬಂಧಗಳು ಕಳಚಿ ಬಿದ್ದಂತೆ ಹುಟ್ಟಿಕೊಂಡ ಚಳವಳಿ ಎಂಬುದು ಗುಹಾ ಅವರ ವಿಶ್ಲೇಷಣೆ. ಇದೇ ಕಾರಣಕ್ಕಾಗಿ ಅಷ್ಟೇನುಕ್ರಾಂತಿಕಾರಕವಾಗಿ ಪರಿಣಮಿಸಲಿಲ್ಲವೆಂದೂ ಅಭಿಪ್ರಾಯ ಪಡುತ್ತಾರೆ. ಈ ಚುಟುಕು ಪ್ರಸ್ತಾಪಗಳ ಉದ್ದೇಶ ಚಿಪ್ಕೋ ಚಳುವಳಿಯ ಬಗ್ಗೆ ನಿಲುವು ತಾಳುವುದಲ್ಲ. ಬದಲಾಗಿ ಚಿಪ್ಕೋ ಬಗೆಗಿನ ವ್ಯಾಖ್ಯಾನಗಳ ಮೂಲಕ ಬೆಳಕಿಗೆ ಬಂದಿರುವ ಅಂಶಗಳ ಸಹಾಯದಿಂದ ಸ್ತ್ರೀ-ಪ್ರಕೃತಿ ಸಮೀಕರಣದ ವಿಷಯದಲ್ಲಿ ಪುನರ್-ವಿವೇಚನೆ ಆರಂಭಿಸುವುದು.

ಇಂಥ ಮರು ಚಿಂತನೆಯಲ್ಲಿ ಆಗಬೇಕಾದ ಮುಖ್ಯ ಬದಲಾವಣೆ ಬಂದಿದೆ. ಎಲ್ಲ ಕಾಲಕ್ಕೂ ಎಲ್ಲ ಸಮಾಜಗಳಿಗೂ ಸಮನಾಗಿ ಅನ್ವಯವಾಗುವ 'ಸ್ತ್ರೀ ಸೂತ್ರ' ಅಥವಾ 'ಪ್ರಕೃತಿ'ಯ ಸ್ವರೂಪದ ಬಗ್ಗೆ ಮಾತನಾಡುವ ಬದಲು ಪ್ರತಿಯೊಂದು ಸಂದರ್ಭದಲ್ಲೂ ಸ್ತ್ರೀತ್ವದ ಕಲ್ಪನೆ, ಲಿಂಗಾಧರಿತ ಸಂಬಂಧಗಳು, ಪರಿಸರದೊಂದಿಗೆ ಇವುಗಳ ನಂಟು ಹೇಗೆ ಬದಲಾಗುತ್ತಾ ಹೋಗುತ್ತದೆ ಎಂದು ಎತ್ತಿ ತೋರಿಸುವುದು ಅಗತ್ಯ. ಮೊದಲೇ ಸೂಚಿಸಿದಂತೆ,

ಪ್ರಕೃತಿಯೊಂದಿಗಿನ ಹೆಣ್ಣಿನ ಸಂಬಂಧ ಆವಳು ಸಮಾಜದ ಯಾವ ವರ್ಗ ಹಾಗೂ ಜಾರಿಗೆ ಸೇರಿರುತ್ತಾಳೆ ಎಂಬುದನ್ನು ಅವಲಂಬಿಸಿದೆ ಮಾತ್ರವಲ್ಲ, ಹೆಂಗಸೊಬ್ಬಳ ಜೀವನಾವಧಿಯಲ್ಲೇ ಆ ಸಂಬಂದ ಬದಲಾವಣೆಗೊಳಗಾಗಬಹುದು. ಸ್ತ್ರೀ-ಪ್ರಕೃತಿಯ ಸಾಮಿಪ್ಯವನ್ನು ನೇರವಾಗಿ ಪ್ರಸ್ತಾಪಿಸುವುದಕ್ಕಿಂತ ಲಿಂಗ–ಜಾತಿ–ವರ್ಗಗಳ ಹಿನ್ನೆಲೆಯಲ್ಲಿ ಈ ಸಂಬಂಧ ಹೇಗೆ ಹೊಸ ತಿರುವುಗಳನ್ನು ಪಡೆದುಕೊಳ್ಳುತ್ತದೆ ಎಂದು ಗಮನಿಸಬೇಕು. ಇಂಥ ಆಯಾಮಗಳನ್ನೊಳಗೊಂಡ ವಿಶ್ಲೇಷಣೆಯ ಮಹತ್ವವನ್ನು ಒಂದೆರಡು ಉದಾಹರಣೆಗಳ ಮೂಲಕ ಸ್ಥಾಪಿಸಬಹುದು. ಮೊದಲನೆಯದಾಗಿ, ಪಿತೃಪ್ರಧಾನ ವ್ಯವಸ್ಥೆಯಲ್ಲಿ ಹೆಂಗಸಿನ ಪ್ರಕೃತಿ ಪ್ರಜ್ಞೆ ಯಾವ ರೀತಿಯದು ಎಂದು ವಿಚಾರಿಸುವುದು ಕುತೂಹಲಕಾರಿ ಪ್ರಶ್ನೆ, ಆಸ್ತಿ ಹಕ್ಕು, ಹೆಂಗಸು ಮತ್ತು ಪರಿಸರಿ ಸಂರಕ್ಷಣೆಯ ನಡುವಿನ ಸಂಬಂಧಗಳೇನೆಂಬುದು ನೇರವಾಗಿ ಗೋಚರವಾಗದಿದ್ದರೂ, ಆಸ್ತಿ ಹಕ್ಕನ್ನುಳ್ಳ ಹೆಣ್ಣು ಮತ್ತು ಆದರಿಂದವಂಚಿತಳಾದವಳು ಭೂಮಿ ಮತ್ತು ಪರಿಸರಗಳನ್ನು ಕಾಣುವ ದೃಷ್ಟಿಯಲ್ಲಿ ಭಿನ್ನತೆಗಳಿವೆಯೇ ಎಂದು ಕೇಳಬಹುದು. ಎರಡನೆಯದಾಗಿ, ನಗರವಾಸಿ ಮತ್ತು ಗ್ರಾಮೀಣ ಹೆಂಗಸರು ನಿಸರ್ಗದೊಂದಿಗೆ ಹೊಂದಿರುವ ಸಂಬಂಧವು ಹೇಗೆ ಭಿನ್ನ ಎಂದು ಆಗಲೇ ಸೂಚಿಸಿದ್ದೇನೆ. ಆದರೆ, ಗ್ರಾಮೀಣ ಪ್ರದೇಶಗಳನ್ನೇ ತೆಗೆದುಕೊಂಡರೂ, ಕುಟುಂಬವೊಂದರ ಎಲ್ಲ ಹೆಂಗಸರಿಗೂ ನಿಸರ್ಗದೊಂದಿಗೆ ಏಕರೂಪವಾದ ಸಂಪರ್ಕವಿದೆ ಎಂದು ಹೇಳಲಾಗುವುದಿಲ್ಲ. ಕುಟುಂಬದೊಳಗಿನ ಕ್ರಮ ವಿಭಜನೆ, ಹೆಂಗಸರು ಸಾಮಾನ್ಯವಾಗಿ ಮಾಡುವ ಕೆಲಸಗಳಲ್ಲೇ ಉಂಟಾಗುವ ಶ್ರೇಣೀಕರಣ, ಇತ್ಯಾದಿ ಅಂಶಗಳಿಂದಾಗಿ ಕೆಲವು ಹೆಂಗಸರಿಗೆ ಪ್ರಕೃತಿಯೊಂದಿಗೆ ಹೆಚ್ಚು ನಿಕಟ ಸಂಪರ್ಕವಿರಬಹುದು, ಮತ್ತೆ ಕೆಲವರಿಗೆ ಅಷ್ಟು ಇಲ್ಲದಿರಬಹುದು, ಉದಾಹರಣೆಗೆ, ಅವಿಭಕ್ತ ಕುಟುಂಬಕ್ಕೆ ಸೇರಿದ ಹೆಂಗಸರಲ್ಲಿ, ಯಾರು ದನ ಮೇಯಿಸಲು ಹೋಗುತ್ತಾರೆ, ಯಾರು ಕಟ್ಟಿಗೆ ಕಡಿಯಲು ಹೋಗುತ್ತಾರೆ, ಯಾರು ಮನೆಯೊಳಗಿನ ಕೆಲಸ ಕಾರ್ಯಗಳನ್ನು ನೋಡಿಕೊಳ್ಳುತ್ತಾರೆ, ಎಂದು ವಿಚಾರಿಸುವುದು ಅಗತ್ಯ. ಕಡೆಯದಾಗಿ ಪರಿಸರದ ಬಗೆಗಿನ ಜ್ಞಾನ–ತಿಳುವಳಿಕೆಗಳು ಎಲ್ಲ ಹೆಂಗಸರಲ್ಲೂ ಸಮನಾಗಿ ಇರುವುದಿಲ್ಲವಾದ್ದರಿಂದ, ಆ ಜ್ಞಾನದ ಹಂಚಿಕೆಯ ಪ್ರಶ್ನೆಯೂ ಮುಖ್ಯವಾಗುತ್ತದೆ. ಗಿಡಮೂಲಿಕೆಗಳ ಬಗೆಗಿನ ಪರಿಜ್ಞಾನದ ಹಂಚಿಕೆಯನ್ನೇ ತೆಗೆದುಕೊಂಡರೆ, ಅದು ಯಾವ ಜಾತಿ-ವರ್ಗದ ಜನರಲ್ಲಿ ಕೇಂದ್ರೀಕೃತವಾಗಿದೆ. ಅವರು ಆ ತಿಳುವಳಿಕೆಯನ್ನು ಹೇಗೆ ರಕ್ಷಿಸುತ್ತಾರೆ. ಅಥವಾ ಹೊಸ ಪೀಳಿಗೆಗೆ ಕಲಿಸುತ್ತಾರೆ ಎಂಬೆಲ್ಲ ಪ್ರಶ್ನೆಗಳನ್ನು ಕೇಳುವ ಮೂಲಕ ಸಮಸ್ಯೆಯ ನಮ್ಮ ಗ್ರಹಿಕೆ ಹೆಚ್ಚು ಪರಿಪೂರ್ಣವಾಗಬಹುದು. ಹೀಗೆ, ಸ್ತ್ರೀ-ಪ್ರಕೃತಿಯ ಸಾಮಿಪ್ಯದ ಪ್ರತಾಪ ಬಂದಾಗಲೆಲ್ಲ ಇವೆರಡೂ ಎಲ್ಲ ಕಾಲಸಂದರ್ಭಗಳಿಗೆ ಅನ್ವಯವಾಗುವ ಸಮಾನ 'ಸತ್ಯ'ವನ್ನೊಳಗೊಂಡ ಸಹಜ ಕ್ಷೇತ್ರಗಳಾಗಿ ಕಾಣಲಾಗಿದೆ. ಈ 'ಸತ್ಯ'ವು ಮರೆಮಾಚುವ ಭಿನ್ನತೆಗಳತ್ತ ಗಮನ ಸೆಳೆಯುವುದೇ ಈ ಟಿಪ್ಪಣಿಯ ಉದ್ದೇಶ. ಹೆಣ್ಣಿನ ಪ್ರಕೃತಿ ಪ್ರಜ್ಞೆಯನ್ನು ಅರ್ಥೈಸಲು ಅವಳ ಸ್ತ್ರೀತ್ವವನ್ನು ಕೇಂದ್ರೀಕರಿಸುವುದಕ್ಕಿಂತ ಹೆಚ್ಚು ವಿಸ್ತಾರವಾದ ಸಾಂಸ್ಕೃತಿಕ ಸನ್ನಿವೇಶದ ಹಿನ್ನೆಲೆಯಲ್ಲಿ ವಿವರಿಸಬೇಕಾಗುತ್ತದೆ. ಲಿಂಗ-ಜಾತಿ-ವರ್ಗಗಳಂಥ ಅಂಶಗಳನ್ನು ಸ್ಪಷ್ಟೀಕರಿಸುವ ಸಾಮಾಜಿಕ ಮತ್ತು ಆರ್ಥಿಕ ಚೌಕಟ್ಟುಗಳೊಳಗೇ ನಮ್ಮ ವಿಶ್ಲೇಷಣೆ ಮುಂದುವರಿಯಬೇಕು.

**ಪ್ರಸ್ತಾಪಿತ ಕೃತಿಗಳ ವಿವರ :**

1. Rama chandra Guha, The Unquiet Woods/ Delhi, OVP 1989.

2. Cicile Jackson, 'Women/Nature or Gender, History ? A Critique of EcoFemenist 'Development' The Journal of peasant Studies, 20 (3), 1993, P. P. 359-419.

3. Shobita Jain, 'Women and people's Ecological Movement in U. P', Economic and Political Weekly, 13 October 1984, PP. 1789-94.

4. Vandana Shiva, Staying Alive : Women, Ecology and Development, London, Zed Books, 1989.

# ಮಹಿಳಾ ಉದ್ಯೋಗಿಗಳ ಸಂಘ – ಮೈಸೂರು

— ನೆಂ. ವನಜ

1993ರ ಅಕ್ಟೋಬರ್ 12ರಂದು ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸದಲ್ಲಿ ಮಹತ್ವದ ಒಂದು ಪುಟ ಸೇರ್ಪಡೆಯಾಗಿತ್ತು. ಮೊಟ್ಟ ಮೊದಲ ಬಾರಿಗೆ ಅದರ ಮಹಿಳಾ ಉದ್ಯೋಗಿಗಳು—ಅಧ್ಯಾಪಕರು ಹಾಗೂ ಅಧ್ಯಾಪಕೇತರರು 'ಮೈಸೂರು ವಿಶ್ವವಿದ್ಯಾನಿಲಯದ ಮಹಿಳಾ ಉದ್ಯೋಗಿಗಳ ಸಂಘ' ಎಂಬ ಹೆಸರಿನಡಿ ಸಂಘಟಿತರಾಗಿದ್ದರು. ಅಂದು ಮೌನ ಮೆರವಣಿಗೆಯಲ್ಲಿ ಹೊರಟ ಮಹಿಳೆಯರೊಂದಿಗೆ ಪುರುಷ ಸಹೋದ್ಯೋಗಿಗಳು ಹಾಗೂ ಸಾರ್ವಜನಿಕರು ಸೇರಿಕೊಂಡಿದ್ದರು. ಕೈಯಲ್ಲಿದ್ದ ಭಿತ್ತಿಚಿತ್ರಗಳು ವಿ.ವಿ.ದ ಭವ್ಯಪರಂಪರೆಯಲ್ಲಿ ಕಪ್ಪುಚುಕ್ಕೆಗಳಂತಿದ್ದ ಕಥೆಗಳನ್ನು ಸಾರಿ ಹೇಳುತ್ತಿದ್ದವು;

'ಅಧ್ಯಾಪಕರ ವಿರುದ್ಧ ಗೋಡೆ ಬರಹಗಳಿಗೆ ಧಿಕ್ಕಾರ'
'ಅಶ್ಲೀಲ ಬರಹಗಳಿಗೆ ಧಿಕ್ಕಾರ'
'ಮಹಿಳಾ ಉದ್ಯೋಗಿಗಳ ಮಾನಸಿಕ ಹಾಗೂ ದೈಹಿಕ ದೌರ್ಜನ್ಯ ನಿಲ್ಲಲಿ'
'ಆಡಳಿತ ವರ್ಗದವರೇ, ಮಹಿಳಾ ಉದ್ಯೋಗಿಗಳ ಸಮಸ್ಯೆಗಳಿಗೆ ಸ್ಪಂದಿಸಿ'
'ವಿ.ವಿ.ದ ಘನತೆಗೆ ಕಳಂಕ ಉಂಟಾಗದಂಥ ವಾತಾವರಣ ನಿರ್ಮಾಣವಾಗಲಿ'
'ತಪ್ಪಿತಸ್ಥರು ಯಾರೇ ಆಗಲಿ, ವಿಚಾರಣೆಗೆ ಗುರಿಯಾಗಲಿ'

ಮುಂತಾದ ಭಿತ್ತಿಚಿತ್ರಗಳು ಮಹಿಳೆಯರ ದುಗುಡ-ದುಮ್ಮಾನಗಳ, ಭಯ-ಆತಂಕಗಳ ಪ್ರತೀಕದಂತಿದ್ದುವು. ಅಪರಾಧಿಗಳನ್ನು ಶಿಕ್ಷಿಸಿ, ಶೈಕ್ಷಣಿಕ ವಾತಾವರಣ ನಿರ್ಮಿಸಿ ಮಹಿಳೆಯರು ನಿರ್ಭಯವಾಗಿ ಕೆಲಸ ಮಾಡುವ ವಾತಾವರಣ ಸೃಷ್ಟಿಸಿ ಮುಂತಾದವುಗಳೇ ಅಂದಿನ ಮುಖ್ಯ ಬೇಡಿಕೆಗಳಾಗಿದ್ದು, ಅವು ಕೇವಲ ಮಹಿಳೆಯರದೇ ಆಗಿರದೆ ಎಲ್ಲಾ ಉದ್ಯೋಗಿಗಳದೂ ಸಹ ಆಗಿತ್ತೇನೋ ಎನ್ನುವಂತಿತ್ತು. ಮಾಧ್ಯಮಗಳು ಕೂಡ ಅತ್ಯಂತ ಸಮರ್ಪಕವಾಗಿ ಸ್ಪಂದಿಸಿದ್ದವು.

ಇಂಥ ಒಂದು ಐತಿಹಾಸಿಕ ಘಟನೆಗೆ ಕಾರಣವಾದದ್ದು ಅದೇ ತಿಂಗಳ ದಿನಾಂಕ 6ರಂದು ವಿ. ವಿ. ದ ಆವರಣದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಇದ್ದಕ್ಕಿದ್ದಂತೆ ಕಾಣಿಸಿಕೊಂಡ ಗೋಡೆ ಹಾಗೂ ನೆಲಬರಹಗಳು. ಅಲ್ಲಿಯ ಅಧ್ಯಾಪಕರನ್ನು ಕುರಿತಂತಿದ್ದ ಈ ಬರಹಗಳು ಅಶ್ಲೀಲತೆಯ ಪರಮಾವಧಿಯನ್ನು ತಲುಪಿದ್ದವು ಎನ್ನುವುದಕ್ಕೆ ಅವುಗಳ ಪ್ರತ್ಯಕ್ಷದರ್ಶಿಗಳಾರೂ ತಮ್ಮ ಬಾಯಿಂದ ಹೇಳಲು ನಿರಾಕರಿಸುತ್ತಿದ್ದರೆನ್ನುವುದೇ ಸಾಕ್ಷಿಯಾಗಿತ್ತು. ಇಂಥ ಬರಹಗಳಿಗೆ ಬಲಿಯಾದವರಲ್ಲಿ ಒಬ್ಬ ಮಹಿಳೆಯೂ ಇದ್ದರು. ಆದರೆ ಪುರುಷ ಅಧ್ಯಾಪಕರನ್ನು ನಿಂದಿಸುವಾಗಲೂ ಅವರ ಮಗಳು, ಹೆಂಡತಿಯರೇ ಬರೆದವರ ನೀಚಪ್ರವೃತ್ತಿಗೆ, ಕೊಳೆತ ಮನಸ್ಸಿಗೆ ಬಲಿಪಶುವಾಗಿದ್ದರು. ಇಂಥ ಬರಹಗಳು ವಿ.ವಿ.ದ ಆವರಣದಲ್ಲಿ ಎಂದೂ ಕಂಡಿರಲಿಲ್ಲವೆನ್ನುವುದು ಹಾಗೂ ಅಧ್ಯಯನ ಸಂಸ್ಥೆಯಲ್ಲಿ ಮೊಟ್ಟಮೊದಲಿನದು ಎನ್ನುವುದೇ ಇವರ ವೈಶಿಷ್ಟ್ಯವಾಗಿತ್ತು!!

ಇದಕ್ಕೆ ಕೆಲವೇ ದಿನಗಳ ಹಿಂದೆ ಇದೇ ಆವರಣದಲ್ಲಿರುವ ಇನ್ನೊಂದು ವಿಭಾಗದ ಗೋಡೆಗಳ ಮೇಲೆ ಅಲ್ಲಿಯ ಮಹಿಳಾ ಅಧ್ಯಾಪಕಿ ಯೊಬ್ಬರನ್ನು ಕುರಿತ ಇಂಥವೇ ಬರಹಗಳು ಮೆರೆದಿದ್ದವು. ಅದಕ್ಕೆ ಮುನ್ನ ವಿದ್ಯಾರ್ಥಿ/ನಿಯರ ಗುಂಪೊಂದು ಸಂಬಂಧಿಸಿದ ಅಧ್ಯಾಪಕಿಯ ಕೊಠಡಿಗೆ ನುಗ್ಗಿ ಅವಾಚ್ಯ ಶಬ್ದಗಳನ್ನು ಬಳಸಿ ಬೆದರಿಸಿದ ಘಟನೆಯೂ ನಡೆದಿತ್ತು. ಇಲ್ಲಿಯೂ ಆ ಅಧ್ಯಾಪಕಿಯ 'ಶೀಲವೇ' ಬೈಗುಳದ ವಸ್ತುವಾಗಿತ್ತು.

ಮೇಲೆ ಹೇಳಿದ, ಎರಡೂ ಪ್ರಕರಣಗಳಿಗೆ ಕಾರಣ ಇಷ್ಟೆ: ವಿದ್ಯಾರ್ಥಿ/ನಿಯರಿಗೆ ಹೆಚ್ಚು ಅಂಕಗಳನ್ನು ಕೊಡದೆ ಇರುವುದು! ಆದರೆ ಇವರಲ್ಲೊಬ್ಬರು ಇತ್ತೀಚಿನ ವರ್ಷಗಳಲ್ಲಿ ಮೌಲ್ಯಮಾಪನವನ್ನೇ ಮಾಡಿಲ್ಲದ ಸತ್ಯವನ್ನು ಕಡೆಗಣಿಸಲಾಗದು!

ಇತ್ತೀಚಿನ ವರ್ಷಗಳಲ್ಲಿ ವಿ. ವಿ., ಆವರಣದಲ್ಲಿ ಅಧ್ಯಾಪಕರು ಹಾಗೂ ವಿದ್ಯಾರ್ಥಿಗಳ ನಡುವಿನ ಘರ್ಷಣೆ

ಸರ್ವೇ ಸಾಮಾನ್ಯ ಸಂಗತಿ. ಇಂದು ಇಂಥ ವಿಭಾಗದಲ್ಲಿ ವಿದ್ಯಾರ್ಥಿಗಳು ಅಧ್ಯಾಪಕರನ್ನು ಹೊಡೆದರು, ಅಂದು ಅಲ್ಲಿ ಯಾರಿಗೋ ಅವಾಚ್ಯ ಶಬ್ದಗಳಿಂದ ಬೈದರು, ಯಾವುದೋ ವಿಭಾಗದ ಕಿಟಕಿ-ಗಾಜುಗಳನ್ನು ಒಡೆದರು. ಅಲ್ಲಿ ಧರಣಿ ನಡೆಯಿತು, ಇಲ್ಲಿ ಕೊಲೆ ಬೆದರಿಕೆ ಹಾಕಿದರು, ಮನೆಗೆ ಕಲ್ಲು ಹೊಡೆದರು—ಮುಂತಾದ ಸುದ್ದಿಗಳು ವಿದ್ಯಾರ್ಥಿ ಸಮುದಾಯವನ್ನು ಅಪರಾಧಿಯಾಗಿಸಿದರೆ, ಇವರು ಜಾತೀಯತೆ ಮಾಡುತ್ತಾರೆ, ಅವರು ಪಾಠ ಸರಿಯಾಗಿ ಮಾಡುವುದಿಲ್ಲ. ಅಂಕ ಕೊಡುವಲ್ಲಿ ಪಕ್ಷಪಾತ ಮಾಡುತ್ತಾರೆ, ವಿದ್ಯಾರ್ಥಿನಿಯರ ಜೀವನದಲ್ಲಿ ಚೆಲ್ಲಾಟವಾಡುತ್ತಾರೆ. ಗುಂಡಾಗಳಿಗೆ ಕುಮ್ಮಕ್ಕು ಕೊಡುತ್ತಾರೆ, ಎಲ್ಲರಿಗೂ ಫಸ್ಟ್‌ಕ್ಲಾಸ್ ಕೊಟ್ಟಿದ್ದಾರೆ, ಇತರ ಅಧ್ಯಾಪಕರ ವಿರುದ್ಧ ವಿದ್ಯಾರ್ಥಿಗಳನ್ನು ಎತ್ತಿಕಟ್ಟುತ್ತಾರೆ—ಮುಂತಾದ ಸುದ್ದಿಗಳು ಅಧ್ಯಾಪಕ ವರ್ಗವನ್ನು ಅಪರಾಧೀ ಸ್ಥಾನದಲ್ಲಿ ನಿಲ್ಲಿಸುತ್ತವೆ. ಒಟ್ಟಿನಲ್ಲಿ ಬಿಡಿಯಾದ ಪ್ರಕರಣದಲ್ಲಿ ಯಾರೋ ಅಪರಾಧೀ ಸ್ಥಾನದಲ್ಲಿ ರಾರಾಜಿಸಿ, ಇನ್ಯಾರೋ ಬಲಿಪಶುವಾಗುತ್ತಾರೆ. ಕೆಲವೊಮ್ಮೆ ಅಪರಾಧಿಗಳು ಪತ್ತೆಯಾಗದೆ, ಪತ್ತೆಯಾದರೂ ಶಿಕ್ಷೆಯಾಗದೆ ಘಟನೆ ಅಲ್ಲಿಗೇ ತಣ್ಣಗಾಗಿ ಎಲ್ಲವೂ ಮೊದಲಿನಂತಾಗಿ ಬಿಡುತ್ತವೆ ! ಇದಕ್ಕೆ ಬಲಿಪಶುವಾದವರ ಮಾನಸಿಕ ಸ್ಥಿತಿಯಲ್ಲಿ ಮಾತ್ರ ನಿರಾಶೆ, ಭಯ, ಆತಂಕಗಳೇ ತುಂಬಿ ಸಂಪೂರ್ಣ ಬದಲಾವಣೆ ಉಂಟಾಗಿರುತ್ತದೆ.

ಆದರೆ ಇಂಥ ಪ್ರಕರಣಗಳಲ್ಲಿ ಮಹಿಳೆಯರು ಬಲಿಯಾಗುತ್ತಿದ್ದುದು/ಅಪರಾಧೀ ಸ್ಥಾನದಲ್ಲಿ ನಿಲ್ಲುತ್ತಿದ್ದುದು ಇಲ್ಲವೆಂದೇ ಹೇಳಬೇಕು. ಕಾರಣ, ವಿದ್ಯಾರ್ಥಿಗಳಿಗೆ ಮಹಿಳೆಯರ ಬಗೆಗಿದ್ದ ಗೌರವ ಭಾವನೆಯೋ ಅಥವಾ ಅವರ ನಿಷ್ಪಕ್ಷಪಾತ ದೃಷ್ಟಿಯಲ್ಲಿ ನಂಬಿಕೆಯೋ ಅಥವಾ 'ಪಾಪ, ಬಡಪ್ರಾಣಿ' ಎಂಬ ಕನಿಕರವೋ, ಅಥವಾ ಯಾವುದೇ ಸ್ವಂತಿಕೆ ಇಲ್ಲದವರು ಎಂಬ ತಾತ್ಸಾರವೋ, ಒಟ್ಟಾರೆ ಮಹಿಳೆಯರು ವಿದ್ಯಾರ್ಥಿಗಳ ಕಾಕದೃಷ್ಟಿಗೆ ಬಲಿಯಾಗುತ್ತಿದುದು ಕಂಡು ಕೇಳರಿಯದ ಸಂಗತಿಯಾಗಿತ್ತು.

ಇಂದು ಪರಿಸ್ಥಿತಿ ಬದಲಾಗಿದೆ. ಸಕಾರಣವಾಗಿಯೋ, ಅಕಾರಣವಾಗಿಯೋ ಮಹಿಳೆಯರು ಇಂಥ ಘಟನೆಗಳಿಂದಾಗಿ ಬೆಳಕಿಗೆ ಬರುತ್ತಿದ್ದಾರೆ. ವಿದ್ಯಾರ್ಥಿ ಸಮುದಾಯ ಮಹಿಳಾ ಅಧ್ಯಾಪಕಿಯರ ಮೇಲೆ ಸೇಡು ತೀರಿಸಿಕೊಳ್ಳುತ್ತಿದೆಯೇನೋ ಎನ್ನುವ ಹಾಗೆ ಘಟನೆಗಳು ಪದೇ ಪದೇ ಪುನರಾವರ್ತನಗೊಳ್ಳುತ್ತಿವೆ. ವಿಪರ್ಯಾಸದ ಸಂಗತಿಯೆಂದರೆ—ಗೋಡೆ ಬರಹಗಳು, ಕಿಟಕಿ ಗಾಜುಗಳಿಗೆ ಕಲ್ಲು ಹೊಡೆಯುವುದು, ಅಧ್ಯಾಪಕರಿಗೆ ಮುತ್ತಿಗೆ ಹಾಕುವುದು, ಅಂಕಗಳಿಗಾಗಿ ಬೆದರಿಕೆ ಹಾಕುವುದು ಮುಂತಾದ ಕಾನೂನು ಬಾಹಿರ ಹಾಗೂ ಅಸಭ್ಯ ಚಟುವಟಿಕೆಗಳಲ್ಲಿ ವಿದ್ಯಾರ್ಥಿನಿಯರು ಮೊದಲಿಗೆ ಪಾಲ್ಗೊಳ್ಳುತ್ತಿರಲಿಲ್ಲ : ಆದರೆ ಹಿಂದೆ ಹೇಳಿದ ಎರಡೂ ಘಟನೆಗಳಲ್ಲಿ ವಿದ್ಯಾರ್ಥಿನಿಯರೂ ಪಾಲ್ಗೊಂಡಿರುವುದು ತಿಳಿದು ಬಂದಿದೆ, ಕ. ಅ. ಸಂ. ಯ ಗೋಡೆ/ನೆಲ ಬರಹಗಳಲ್ಲಿ ವಿದ್ಯಾರ್ಥಿನಿಯರ ನೇರ ಪಾತ್ರ ಇರಲಿಲ್ಲವೆಂದಾದರೂ ಅಂಥ ನೆಲಬರಹಗಳನ್ನು ಕಂಡೂ ಅವುಗಳ ಮೇಲೇ ಕುಳಿತು ಧರಣಿಯಲ್ಲಿ ಭಾಗವಹಿಸಿದುದೊಂದು ದುರಂತವೇ ಸರಿ. ನಂತರ ಸ್ಥಳಕ್ಕೆ ಧಾವಿಸಿದ 'ಸಮತಾ' ಪ್ರತಿನಿಧಿಗಳು ಮತ್ತಿತರ ಅಧ್ಯಾಪಕರು,ಪತ್ರಕರ್ತರು ಮುಂತಾದವರು ವಿದ್ಯಾರ್ಥಿ/ನಿಯರಿಗೆ ಛೀಮಾರಿ ಹಾಕಿದ ಮೇಲೆ ಆ ಬರಹಗಳನ್ನು ಅಳಿಸಿ-ಹಾಕುವ ಕೆಲಸದಲ್ಲಿ ಆ ವಿದ್ಯಾರ್ಥಿನಿಯರೂ ಪಾಲ್ಗೊಂಡರೆನ್ನುವುದು ಸಮಾಧಾನಕರ ಸಂಗತಿ. ಹಾಗೇ ಇನ್ನೊಬ್ಬ ಅಧ್ಯಾಪಕಿಯ ಮೇಲೆ ಮಾತಿನ ಧಾಳಿ (ಅವಾಚ್ಯ ಶಬ್ದಗಳ ಧಾಳಿ) ನಡೆದಾಗಲೂ ವಿದ್ಯಾರ್ಥಿನಿಯರು ತಮ್ಮ ಸಹಪಾಠಿಗಳಿಗೆ ಬೆಂಬಲ ನೀಡಿದರೆನ್ನಲಾಗಿದೆ. ಇದನ್ನು ಅವರ ನೈತಿಕ ದಿವಾಳಿತನವೋ, ಮೌಢ್ಯದ ಪರಮಾವಧಿಯೆಂದೋ ಅಂದುಕೊಳ್ಳದೆ ವಿಧಿಯಿಲ್ಲ.

ಇತ್ತೀಚಿನ ವರ್ಷಗಳಲ್ಲಿ ನಡೆದ ಇನ್ನೊಂದು ಪ್ರಕರಣವೆಂದರೆ, ಮಾನಸಗಂಗೋತ್ರಿ ಆವರಣದಲ್ಲಿರುವ ಕಾಲೇಜೊಂದರಲ್ಲಿ ಪರೀಕ್ಷೆಯ ಫಲಿತಾಂಶಗಳು ಹೊರಬರುತ್ತಿದ್ದಂತೆ ವಿದ್ಯಾರ್ಥಿಗಳೆಲ್ಲಾ ಪ್ರಿನ್ಸಿಪಾಲರ ಕೊಠಡಿಗೆ ನುಗ್ಗಿದರಂತೆ. ಗಾಭರಿಗೊಂಡ ಅವರು ತಮ್ಮ ರಕ್ಷಣೆಯ ಮಾರ್ಗವಾಗಿ ತಮ್ಮ ಮಹಿಳಾ ಸಹೋದ್ಯೋಗಿಯ ಕಡೆ ಬೆರಳು ಮಾಡಿದರಂತೆ. ಕೂಡಲೆ ಆ ದಂಡು ಇವರನ್ನು ಮುತ್ತಿಗೆ ಹಾಕಿತಂತೆ. ನಂತರ ಅವರ ಹೆಸರು ಅದೇ ವಿಭಾಗದ ಪುರುಷ ಸಹೋದ್ಯೋಗಿಯೊಬ್ಬರ ಹೆಸರಿನೊಂದಿಗೆ ಕಾಲೇಜಿನ ಗೋಡೆಗಳ ಮೇಲೆಲ್ಲಾ ರಾರಾಜಿಸಿತಂತೆ ! ಇನ್ನೊಂದು ಪ್ರಕರಣದಲ್ಲಿ ಅದೇ ಅಧ್ಯಾಪಕಿಗೆ ಕೊಲೆ ಬೆದರಿಕೆಯೂ ಬಂದಿತ್ತೆನ್ನುವುದು ತಿಳಿದು ಬರುತ್ತದೆ.

ಕೆಲವು ತಿಂಗಳುಗಳ ಹಿಂದೆ ವಿ.ವಿ. ಕಾಲೇಜೊಂದರಲ್ಲಿ ವಿದ್ಯಾರ್ಥಿನಿಯರಿಗೆ ಮಾತ್ರ ಪ್ರವೇಶ ನೀಡಬೇಕೆಂಬ ವಿ.ವಿ.ದ ಸೆನೆಟ್ ತೀರ್ಮಾನದಲ್ಲಿ ಮಹಿಳಾ ಸದಸ್ಯೆಯೊಬ್ಬರ ಮುಖ್ಯ ಪಾತ್ರವಿದೆ ಎಂಬ ಅಭಿಪ್ರಾಯದ ಹಿಂದೆಯೇ ಅವರ ಬಗೆಗಿನ ಅಶ್ಲೀಲ ಬರಹಗಳು ಎಲ್ಲೆಲ್ಲೂ ಕಾಲೇಜಿನ ಗೋಡೆಗಳ ಮೇಲೆ ಮತ್ತಿತರ ಕಡೆಗಳಲ್ಲಿ ಕಂಡು ಬಂದವು. ಇಂಥ ಬರಹಗಳ ಹಿಂದೆ ಅದೇ ಕಾಲೇಜಿನಲ್ಲಿ ಪ್ರವೇಶ ಬಯಸಿದ್ದ ವಿದ್ಯಾರ್ಥಿಗಳ ಕೈವಾಡ ಇದ್ದಿತೆಂದು ಹೇಳಲಾಗಿದೆ. ಅದೇ ವಿದ್ಯಾರ್ಥಿಗಳು ಆ ಸದಸ್ಯೆಯ ಮನೆಯವರೆಗೂ ಹಾದಬೆಳೆಸಿ ಬೆದರಿಸುವ ಪ್ರಯತ್ನ ಮಾಡಿತ್ತೆಂದು ಸುದ್ದಿಯಾಗಿತ್ತು.

ಇದುವರೆಗೆ ಹೇಳಿದ ಪ್ರಕರಣಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ವಿದ್ಯಾರ್ಥಿಗಳ ಪಾತ್ರ ಇದೆಯೆಂದಾದರೆ ಪುರುಷ ಸಹೋದ್ಯೋಗಿಗಳು, ವಿ.ವಿ.ದ ಅಧಿಕಾರೀ ವರ್ಗದವರ ಪಾತ್ರವಿರುವ ಹಲವಾರು ಪ್ರಕರಣಗಳು ನೆನಪಿನಾಳದಿಂದ ಇಣುಕುತ್ತವೆ. ಮಹಿಳಾ ಉದ್ಯೋಗಿಗಳನ್ನು ಹೀನಾಯವಾಗಿ ನಡೆಸಿಕೊಳ್ಳುವುದು, ಪುರುಷ ಉದ್ಯೋಗಿಗಳ ಹೆಸರನ್ನು ಜೋಡಿಸುವುದು, ನಡತೆಯ ಮೇಲೆ ಗೂಬೆ ಕೂರಿಸುವುದು, ತಮಗೆ ಎಷ್ಟು ಮಹಿಳೆಯರೊಂದಿಗೆ ಸಂಬಂಧವಿದೆಯೆಂದು ಪಟ್ಟಿ ಮಾಡುವುದು ಮಹಿಳೆಯರ ಜೀವನ ಚರಿತ್ರೆಗಳೆಲ್ಲಾ ತಮ್ಮ ಬಳಿ ಇದೆಯೆಂದು ಜಂಬಕೊಚ್ಚಿಕೊಳ್ಳುವುದು, ತನಗೆ ದಕ್ಕದ ದ್ರಾಕ್ಷಿ ಹಣ್ಣನ್ನು ನರಿ ಹುಳಿ ಎಂದಂತೆ ನಡೆದುಕೊಳ್ಳುವುದು, ಸ್ವಂತಿಕೆ ಪ್ರದರ್ಶಿಸಿದವರ ಪ್ರಮೋಷನ್‌ಗೆ ಕಲ್ಲು ಹಾಕುವುದು ಮುಂತಾದ ಚಟುವಟಿಕೆಗಳು ವಿ.ವಿ.ದಲ್ಲಿ ಹಲವಾರು ವರ್ಷಗಳಿಂದಿರುವವರಿಗೆ ತಿಳಿಯದ ಸಂಗತಿಯೇನಲ್ಲ!

ಇದು ಎಂಬತ್ತರ ದಶಕದ ಪ್ರಕರಣ. ತಾತ್ಕಾಲಿಕ ನೇಮಕಾತಿಯ ಮೇಲೆ ಕೇವಲ 100ರೂ.ಗಳಿಗೆ ಹಾಸ್ಟೆಲ್ಲೊಂದರಲ್ಲಿ ಕೆಲಸ ಮಾಡುತ್ತಿದ್ದ ಅವಿವಾಹಿತ ಮಹಿಳೆಯೊಬ್ಬಳನ್ನು ಕೆಲಸದಿಂದ ತೆಗೆದು ಹಾಕಿ ಆ ಜಾಗದಲ್ಲಿ ತನಗೆ ಬೇಕಾದ ಹುಡುಗಿಯೊಬ್ಬಳನ್ನು ಕೂರಿಸಬೇಕೆಂಬ ಆಲೋಚನೆ ಸಂಬಂಧಪಟ್ಟ ಅಧಿಕಾರಿಗೆ ಬಂದದ್ದೇ ತಡ, ಆ ಮಹಿಳೆಯ 'ನಡತೆ'ಯ ಮೇಲೆ ಸತತವಾಗಿ ವ್ಯವಸ್ಥಿತವಾಗಿ ಅಧಿಕಾರಿಯ ಬಾಯಿಂದಲೇ ಪ್ರಚಾರ ದೊರಕಿತು. ಇದು ಎಲ್ಲಿಯವರೆಗೆಂದರೆ ಕಾರ್ಮಿಕ ಅಧಿಕಾರಿಯವರೆಗೂ ತಲುಪಿತು. ಪರಿಣಾಮವಾಗಿ, ಕಾರ್ಮಿಕ ಅಧಿಕಾರಿಯ ಸಹಾನುಭೂತಿಯೊಂದನ್ನು ಬಿಟ್ಟು ಅವಳಿಗೆ ಯಾರಿಂದಲೂ, ಯಾವುದೇ ಸಂಘಟನೆಯಿಂದಲೂ ಸಿಗಬಹುದಾದ ಬೆಂಬಲ ಸಿಗಲಿಲ್ಲ. ಮಹಿಳಾ ಸಂಘಟನೆಯೊಂದರ ಸದಸ್ಯರೇ ಅಂಥ ಗಾಳಿ ಸುದ್ದಿಯನ್ನು ನಂಬುವಂತಾಯಿತು; ಸುಮ್ಮನಾಗುವಂತಾಯಿತು!

ಪುರುಷ ಸಹೋದ್ಯೋಗಿಗಳನ್ನೇ ಅವಮಾನಗೊಳಿಸಬೇಕು, ತರಾಟೆಗೆ ತೆಗೆದುಕೊಳ್ಳಬೇಕು, ಬುದ್ಧಿ ಕಲಿಸಬೇಕು ಮುಂತಾದ ಉದ್ದೇಶಗಳು ಹಲವು ಪ್ರಕರಣಗಳ ಹಿಂದಿದ್ದರೂ ಬಲಿಯಾಗುವವರು ಅವರ ಮಹಿಳಾ ಸಹೋದ್ಯೋಗಿಗಳು, ತಾಯಂದಿರು, ತಂಗಿಯರು, ಹೆಂಡತಿ, ಮಗಳು—ಒಟ್ಟಿನಲ್ಲಿ ಮಹಿಳೆಯರು! ಉದಾಹರಣೆಗೆ ಸಹೋದ್ಯೋಗಿಯೊಬ್ಬರ ಉನ್ನತಿ ಸಹಿಸದ ಒಬ್ಬರು ತಮ್ಮ ವಿದ್ಯಾರ್ಥಿನಿಯೇ ಆಗಿದ್ದು ಸದ್ಯದಲ್ಲಿ ಸಹೋದ್ಯೋಗಿಯಾಗಿದ್ದ ಅವಿವಾಹಿತ ಮಹಿಳೆಯೊಂದಿಗೆ ತನ್ನ ಸಹೋದ್ಯೋಗಿಗೆ ಲೈಂಗಿಕ ಸಂಬಂಧ ಇರುವ ಕಟ್ಟುಕತೆ ಹಬ್ಬಿಸಿ ಅವರ ತೇಜೋವಧೆ ಮಾಡಲು ಪ್ರಯತ್ನಿಸಿದ್ದು ಗಂಗೋತ್ರಿಯಲ್ಲಿ ಹಸಿಹಸಿಯಾದ ನೆನಪು. ಅದುವರೆಗೆ ಅಲ್ಲಿ ಅಧ್ಯಾಪಕಿಯರಾರೂ ನೇಮಕ ಹೊಂದಿಲ್ಲದಿದ್ದು ಅದೇ ಮೊದಲ ಬಾರಿಗೆ ಅವಳು ನೇಮಕಗೊಂಡಿದ್ದುದು, ಪ್ರಮೋಷನ್‌ಗೆ ಎಲ್ಲಾ ಅರ್ಹತೆಗಳನ್ನು ಹೊಂದಿದ್ದುದು ಗಮನಿಸಬೇಕಾದ ಅಂಶಗಳು.

ಇಂದಿಗೂ ಹಲವು ವಿಭಾಗಗಳಲ್ಲಿನ ಅಧ್ಯಾಪಕ ವರ್ಗದಲ್ಲಿ ಮಹಿಳೆಯರ ಸಂಖ್ಯೆ ಇಲ್ಲವೇ ಇಲ್ಲ ಅಥವಾ ಇದ್ದರೂ ಅವರು ಅಲ್ಪಸಂಖ್ಯಾತರು ಎನ್ನುವುದು ಸತ್ಯ. ಈ ಮಾತಿಗೆ ಹೊರತೆಂಬಂತೆ ಎರಡು ವಿಭಾಗಗಳಲ್ಲಿ ಮಾತ್ರ ಶಿಕ್ಷಣ ಹಾಗೂ ಗೃಹವಿಜ್ಞಾನ—ಮಹಿಳೆಯರೇ ಹೆಚ್ಚಿನ ಸಂಖ್ಯೆಯಲ್ಲಿರುವುದೊಂದು ವಿಶೇಷ ಎನ್ನಬಹುದಾದರೂ ಅಚ್ಚರಿಯೆನಿಸುವುದಿಲ್ಲ! ಗೃಹವಿಜ್ಞಾನ ಎಂದ ಕೂಡಲೆ ಗೃಹಕೃತ್ಯ, ಗೃಹಾಲಂಕಾರ, ಅಡಿಗೆ ಮುಂತಾದ ವಿಷಯಗಳೆಂದೇ ಅರ್ಥೈಸಿಕೊಳ್ಳುವ ಮಂದಿ ಇರುವಾಗ, 'ಹೆಣ್ಣೊಂದು ಕಲಿತರೆ ಶಾಲೆಯೊಂದ ತೆರೆದಂತೆ' ಎಂಬ ಘೋಷಣೆಯೊಂತಿಗೇ ಸಾಕ್ಷರತಾ ಕಾರ್ಯಕ್ರಮಗಳು ಎಲ್ಲೆಡೆ ನಡೆಯುತ್ತಿರುವಾಗ, ಮಹಿಳೆಯರು ಗೃಹಕೃತ್ಯ ನೋಡಿಕೊಳ್ಳಬೇಕು, ಹೆಚ್ಚೆಂದರೆ ಶಿಕ್ಷಣವಂತರಾಗಬಹುದು ಎಂಬ ಸಮಾಜದ ಒಪ್ಪಿತ ಪಾತ್ರಗಳನ್ನೇ

ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಈ ವಿಭಾಗಗಳಲ್ಲಿ ನಿರ್ವಹಿಸುತ್ತಾ ಬರುತ್ತಿರುವುದು ಕೇವಲ ಕಾಕತಾಳೀಯ; ವಲ್ಲದಿರಬಹುದು!

ಇತ್ತೀಚಿನ ಘಟನೆಗಳ ಬಗ್ಗೆ ಅಧ್ಯಾಪಕ/ಕಿಯರನ್ನು ಮಾತನಾಡಿಸಿದಾಗ, ಇದಕ್ಕೆಲ್ಲಾ ಅಧ್ಯಾಪಕರಲ್ಲಿ ಒಗ್ಗಟ್ಟಿನ ಕೊರತೆಯೇ ಕಾರಣ; ಅವರು ತಮಗಾಗದ ಅಧ್ಯಾಪಕರ ಮೇಲೆ ವಿದ್ಯಾರ್ಥಿಗಳನ್ನು ಎತ್ತಿ ಕಟ್ಟುತ್ತಾರೆ ಇತರರು ಹಲ್ಲೆಗೊಳಗಾದರೆ ತಮಗೆ ಸಂಬಂಧವಿಲ್ಲದವ ರಂತೆ ವರ್ತಿಸುತ್ತಾರೆ; ವಿಶ್ವವಿದ್ಯಾನಿಲಯದ ಆಡಳಿತ ವರ್ಗವೂ ಯಾವುದೇ 'ರಿಸ್ಕ್' ತೆಗೆದುಕೊಳ್ಳುವುದಿಲ್ಲ, ಅಧ್ಯಾಪಕರ ಸಮಸ್ಯೆಗಳಿಗೆ ಸ್ಪಂದಿಸಿದರೆ ವಿದ್ಯಾರ್ಥಿ ಗಳನ್ನು ಎದುರುಹಾಕಿಕೊಂಡಂತಾಗುತ್ತದೆ. ಅವರ ಹಿಂದಿರುವ ಸಂಘ ಸಂಸ್ಥೆಗಳ ಸಿಟ್ಟನ್ನು ಎದುರಿಸಬೇಕಾಗು ತ್ತದೆ. ತಮ್ಮ ಕುರ್ಚಿ ಅಲುಗಾಡುತ್ತದೆ. ಆದ್ದರಿಂದ ವಿ.ವಿ.ದ ಅಧಿಕಾರಿಗಳಿಂದ ಏನನ್ನೂ ನಿರೀಕ್ಷಿಸುವಂತಿಲ್ಲ. ವಿದ್ಯಾರ್ಥಿಗಳೂ ಅಷ್ಟೇ. ಸುಲಭವಾಗಿ ಅಂಕ ಪಡೆಯುವ, ಕ್ಲಾಸ್‌ಗಿಟ್ಟಿಸುವ ಮಾರ್ಗ ಕಂಡುಕೊಂಡಿದ್ದಾರೆ. ಇದಕ್ಕೆ ಪ್ರೌಢಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸಿರುವುದು ಹಾಗೂ ಇತರ ವಿ.ವಿ.ಗಳು ಇಲ್ಲದಾಗ ಇಲ್ಲಿದ್ದಷ್ಟು (ಪ್ರವೇಶಕ್ಕೆ) ಸೀಟುಗಳನ್ನೇ ಈಗಲೂ ಮುಂದು ವರೆಸುತ್ತಿರುವುದೇ ಮುಖ್ಯ ಕಾರಣವೆನ್ನುತ್ತಾರೆ ಅಧ್ಯಾಪಕ ವರ್ಗದವರು. ಇದಕ್ಕೆ ಪರಿಹಾರವೇನು ? ಎಂಬ ಪ್ರಶ್ನೆಗೆ ಅಧ್ಯಾಪಕಿಯೊಬ್ಬರ ಮಾತು ಗಳು ಹೆಚ್ಚು ಸಮರ್ಪಕ ಹಾಗೂ ಸಮಂಜಸವೆನಿಸಿತು. ನಮ್ಮ ಸಮಾಜದಲ್ಲಿ ಹೆಣ್ಣಿನ 'ಶೀಲ'ಕ್ಕೆ ಇರುವ ಮಹತ್ವ ಬೇರಾವುದಕ್ಕೂ ಇರಲಾರದು. ಅದರಿಂದಾಗಿಯೇ ಮಹಿಳೆಯರನ್ನು ಅವಮಾನಿಸಬೇಕು, ನೋಯಿಸಬೇಕು, ಸ್ವಾಭಿಮಾನದಿಂದ ಮತ್ತೆಂದೂ ತಲೆಯೆತ್ತಿ ನಡೆಯ ಬಾರದು ಎಂಬ ಉದ್ದೇಶವಿದ್ದಾಗ 'ಶೀಲ'ದ ಮೇಲೆ ಅಪಪ್ರಚಾರ ನಡೆಯುತ್ತಿರುತ್ತದೆ. ಕಾರಣಗಳೇನೇ ಇರಲಿ, ಪರಿಹಾರ ಮಾತ್ರ ಒಂದೇ! ಮಹಿಳೆಯರು ಇಂಥವನ್ನು ಕಡೆಗಣಿಸಬೇಕು. ಏನೂ ಆಗಿಲ್ಲವೆಂಬಂತೆ ಮೊದಲಿನಂತಿರಲು ಪ್ರಯತ್ನಿಸಬೇಕು. ಆಗ ಮಾತ್ರ ಇಂಥ ನೀಚ ಪ್ರಯತ್ನಗಳ ನಿಷ್ಪ್ರಯೋಜಕತೆ ಇತರರಿಗೆ ಅರಿವಾಗಬಹುದು. ಇಂಥದೇ ಅಭಿಪ್ರಾಯ ಇನ್ನೊಬ್ಬ ಅಧ್ಯಾಪಕಿಯದೂ ಆಗಿತ್ತು: ಪುರುಷರ ಶೀಲದ ಬಗ್ಗೆ ಇತರರು ಆಡಿಕೊಂಡರೆ ತಲೆಕೆಡಿಸಿಕೊಳ್ಳದಿರುವುದು ಪುರುಷರಿಗೆ ಸಾಧ್ಯವಾದರೆ ನಮಗೇಕೆ (ಹೆಣ್ಣಿಗೇಕೆ) ಅದು ಸಾಧ್ಯವಾಗಬಾರದು ?"

ಹೌದು, ನಮಗೆ ಹಾಗಿರುವುದು ಸಾಧ್ಯವಾಗಬೇಕು. ಆದರೆ ಅದು ಎಷ್ಟು ಮಟ್ಟಿಗೆ ಈಗಿನ ಸಾಮಾಜಿಕ ಸಂದರ್ಭದಲ್ಲಿ ಸಾಧ್ಯವಾಗಬಹುದು ? ಇದೇ ಆವರಣ ದಲ್ಲಿರುವ ಅಧ್ಯಾಪಕಿಯೊಬ್ಬರು ಮದುವೆಯಾಗ ಬೇಕೆಂದಿದ್ದ ಹುಡುಗನಿಗೆ ಭಾವೀಪತ್ನಿಯ ಶೀಲ ಕುರಿತ ಅನಾಮಧೇಯ ಪತ್ರಗಳು ಒಂದಾದ ಮೇಲೊಂದರಂತೆ ಬರತೊಡಗಿದವಂತೆ! ಆದರೆ ಇದರಿಂದ ಮದುವೆ ಮುರಿದುಬೀಳಲಿಲ್ಲ. ಮದುವೆಗೆ ಮುಂಚೆಯೇ ಹುಡುಗ ಇವರನ್ನು ಭೇಟಿಮಾಡಿ ವಿಚಾರ ತಿಳಿಸಿ ಬೇಕಾದ ವಿವರಣೆ ಪಡೆದನಂತೆ. ತಿಳಿಮನಸ್ಸಿನಿಂದ ಮದುವೆಗೆ ಸಿದ್ಧನಾದನಂತೆ! ಮಕ್ಕಳ ತಾಯಿಯಾಗಿರುವ ಆ ಅಧ್ಯಾಪಕಿ ಈಗಲೂ ಹಳೆಯ ಘಟನೆಯನ್ನು ನೋವಿ ನಿಂದ ನೆನಸಿಕೊಳ್ಳುತ್ತಾರೆ. ಇಂಥವು ಎಲ್ಲರ ಬಾಳಲ್ಲೂ ನಡೆಯುವುದೆಂದು ಹೇಳಲಾಗದು; ಮದುವೆ ಗಳು ಮುರಿಯುತ್ತವೆ; ಪ್ರೇಮಿಗಳು ದೂರಾಗುತ್ತಾರೆ; ಮನೆಗಳು ಒಡೆಯುತ್ತವೆ; ಸಮಾಜದ ಅಘೋಷಿತ ಬಹಿಷ್ಕಾರಗಳು ನಡೆಯುತ್ತವೆ; ನೆಮ್ಮದಿ ಮಾಯ ವಾಗುತ್ತದೆ, ಭವಿಷ್ಯ ಕತ್ತಲಾಗುತ್ತದೆ ಎಷ್ಟೋ ಹೆಣ್ಣು ಮಕ್ಕಳಿಗೆ—ಇಂಥ ಕಾರಣಗಳಿಂದಾಗಿ!

ಒಂದು ಕಾಲದಲ್ಲಿ ಮನೆಯೇ ಪ್ರಪಂಚ,ಮದುವೆಯೇ ಬಾಳಿನ ಗುರಿ, ಶೀಲವೇ ಸರ್ವಸ್ವವೆಂದು ತಿಳಿಯುತ್ತಿದ್ದ ಅಥವಾ ಹಾಗೆ ತಿಳಿದಿರಲೆಂದು ನಿರೀಕ್ಷಿಸುತ್ತಿದ್ದ. ಅದಕ್ಕಾಗಿ ಹಲವಾರು ಕಟ್ಟುಪಾಡುಗಳನ್ನು ಹೇರಿ ಶತಮಾನಗಳ ವರೆಗೆ ಹೆಣ್ಣನ್ನು ಹಾಗೇ ನಡೆಸಿಕೊಂಡು ಬಂದಿದ್ದ ಸಮಾಜ ದಲ್ಲಿ, ಇತ್ತೀಚಿನ ವರ್ಷಗಳಲ್ಲಿ ಹೆಣ್ಣು ಮನೆಯಿಂದ ಹೊರಗೆ ಕಾಲಿಟ್ಟು ವಿವಿಧ ಕ್ಷೇತ್ರಗಳನ್ನು ಪ್ರವೇಶಿಸಿದ್ದಾಳೆ, ಪ್ರವೇಶಿಸುತ್ತಿದ್ದಾಳೆನ್ನುವ ಕಾರಣಕ್ಕಾಗಿಯೇ ಸಾಮಾಜಿಕ ದೃಷ್ಟಿಕೋನದಲ್ಲಿ ಮೂಲಭೂತ ಬದಲಾವಣೆಯನ್ನು ನಿರೀಕ್ಷಿಸುವುದು ತಪ್ಪಾಗುತ್ತದೆ. ಇಂದು ಮಹಿಳೆಯ ಸ್ಥಾನಮಾನಗಳು ಅವಳ ಉಡುಗೆ–ತೊಡುಗೆ,ಮ್ಯಾನರಿಸಂ ಕ್ಲಬ್ ಜೀವನ, ಶಿಕ್ಷಣ, ಉದ್ಯೋಗ ಮುಂತಾದ ವಿಚಾರ ಗಳ ಮಟ್ಟಿಗೆ ಬದಲಾಗುತ್ತಿವೆಯೆನ್ನಬಹುದೇ ಹೊರತು ಉಳಿದ ವಿಚಾರಗಳಲ್ಲಿ ಅವರು ಶೋಕೇಸಿನ ಬೊಂಬೆ

ಗಳಂತಿದ್ದಾರೆಂದೇ ಹೇಳಬೇಕು. ಒಂದು ಕಾಲದಲ್ಲಿ ರಚಿತವಾದ ವೇದೋಪನಿಷತ್ತುಗಳು, ಮಹಾಕಾವ್ಯಗಳು, ಸ್ಮೃತಿಗಳೇ ಇಂದಿಗೂ ನಮ್ಮ ಸಂಸ್ಕೃತಿಯ ಆಧಾರ ಸ್ತಂಭಗಳಾಗುತ್ತವೆ. ಅವುಗಳನ್ನು ಉದಹರಿಸುತ್ತಲೇ ಮಹಿಳೆಯ ಸ್ಥಾನಮಾನ'ಗಳನ್ನು ನಿರ್ಧರಿಸುವ ಪ್ರಯತ್ನಗಳಾಗುತ್ತವೆ. ವೇದಗಳ ಕಾಲದಲ್ಲಿ ಮಹಿಳೆಯರಿಗೆ ಉತ್ತಮ ಸ್ಥಾನಮಾನಗಳು ದೊರಕಿದ್ದವೆಂದೇ ಪಂಡಿತರು ಪಾಮರರಿಗೆ ತಿಳಿಸಿಕೊಡುತ್ತಿರುತ್ತಾರೆ. ವೇದಗಳ ಕಾಲದಲ್ಲೇ ಮಹಿಳೆಯರು ಗಂಡಿನ ಆಸ್ತಿ, (ಅಥರ್ವ ವೇದ) ಫಲಕೊಡುವ ಭೂಮಿ ಎಂಬ ಕಲ್ಪನೆಗೊಳಗಾಗಿದ್ದಳು. ಕೈಯಿಂದ ಕೈಗೆ ಜಾರಿಹೋಗುವ ಲೈಂಗಿಕ ವಸ್ತುವಾಗಿದ್ದಳೆಂಬ (ಸ್ಮೃತಿಗಳ ಕಾಲ) ಸತ್ಯವನ್ನು ಮರೆಮಾಚುತ್ತಾರೆ. ಮನುವಿನಂಥ ಸ್ಮೃತಿಕಾರರು ನಮ್ಮ ಸಮಾಜದ ಮೇಲೆ ಇಂದಿಗೂ ಪ್ರಭಾವ ಹೊಂದಿರುವುದನ್ನು ಕಾಣುತ್ತೇವೆ.

ಸ್ವತಂತ್ರ ಭಾರತದ ಸಂವಿಧಾನ ಮಹಿಳೆಯರಿಗೆ ಪುರುಷರೊಂದಿಗೆ ಸಮಾನ ಸ್ಥಾನಮಾನಗಳನ್ನು ನೀಡುವ ಪ್ರಯತ್ನ ಮಾಡಿದೆ. ಇಷ್ಟಾದರೂ ಅನೇಕ ಧರ್ಮಾಧಾರಿತ ಕಾನೂನುಗಳಿಗೆ–ಕುಟುಂಬ,ಆಸ್ತಿ ಹಕ್ಕು, ದತ್ತುಸ್ವೀಕಾರ, ಜೀವನಾಂಶ, ಮುಂತಾದ ವಿಚಾರಗಳಲ್ಲಿ–ತನ್ನ ಒಪ್ಪಿಗೆ ನೀಡುವ ಮೂಲಕ ಅಸಮಾನತೆಯ ಬುನಾದಿ ಹಾಕಿದೆ. ಈ ಧರ್ಮಾಧಾರಿತ ಕಾನೂನುಗಳು ಮಹಿಳೆಯ ಸ್ಥಾನಮಾನಗಳನ್ನು ನಿರ್ಧರಿಸುವಲ್ಲಿ ಮಹತ್ವದ ಪಾತ್ರ ನಿರ್ವಹಿಸುತ್ತವೆ ಹಾಗೂ ಯಾವುದೇ ಸಾಮಾಜಿಕ ಬದಲಾವಣೆ ಕನಸಿನ ಮಾತಾಗುತ್ತದೆ. ಪಿತೃಪ್ರಧಾನ ವ್ಯವಸ್ಥೆ ಹಾಗೂ ಅದರ ಪರಿಣಾಮವಾಗಿ ಹುಟ್ಟಿಕೊಳ್ಳುವ ಇಂಥ ಸಮಸ್ಯೆಗಳು ಹೀಗೇ ಮುಂದುವರೆಯುತ್ತಿರುತ್ತವೆ. ಮಹಿಳೆಯ ಸಮಾನತೆ ಎನ್ನುವುದು ಸಂವಿಧಾನದಲ್ಲಿ, ಸಾಮಾಜಿಕ ಬದಲಾವಣೆಗಾಗಿ ತುಡಿಯುತ್ತಿರುವ ಕೆಲವೇ ಮಂದಿ ಬುದ್ಧಿಜೀವಿಗಳ, ಚಳುವಳಿಕಾರರ, ಸಂಘಟನೆಗಳ, ಸಾಮಾಜಿಕ ಕಾರ್ಯಕರ್ತರ ಚಿಕ್ಕ ವರ್ತುಲದಲ್ಲಿ ಚಲಾವಣೆಯ ಶಬ್ದವಾಗುಳಿಯುತ್ತದೆ.

ಕೇವಲ ವಸ್ತುವಾಗಿದ್ದ ತಾನು ವ್ಯಕ್ತಿಯಾಗಿ, ಪರಾವಲಂಬಿಯಾಗಿದ್ದವಳು ಸ್ವಾವಲಂಬಿಯಾಗಿ, ಗುಲಾಮಳಾಗಿದ್ದವಳು ಸ್ವತಂತ್ರಳಾಗಿ, ನಿರಭಿಮಾನಿಯಾಗಿದ್ದವಳು ಸ್ವಾಭಿಮಾನಿಯಾಗಿ, ತ್ಯಾಗಿಯಾಗಿದ್ದವಳು ತನಗಾಗಿ ಬದುಕಬೇಕಾಗಿರುವ ಹೆಣ್ಣು. ಆದಕ್ಕಾಗಿ ಪ್ರತಿಯೊಂದು ಹಂತದಲ್ಲೂ ತನ್ನ ವೈಯಕ್ತಿಕ ಬದುಕಿನಲ್ಲಿ ಹಾಗೂ ಸಾಮಾಜಿಕ ಬದುಕಿನಲ್ಲಿ–ದೊಡ್ಡ ಹೋರಾಟಕ್ಕೆ ಸತತ ಹೋರಾಟಕ್ಕೆ ಸಿದ್ಧಳಾಗಬೇಕಾಗಿದೆ. ಇದಕ್ಕೆ ಅಧ್ಯಾಪಕಿಯೊಬ್ಬರು ಹೇಳಿದ ಮಾತುಗಳು ನಮಗೆ ನೆರವಾಗಬಹುದೆ ?

—ವೆಂ. ವನಜ
ಮೈಸೂರು

## ಮೊದಲ ಮಹಿಳಾ ಮುಖ್ಯ ನ್ಯಾಯಾಧೀಶೆ

ಶ್ರೀಮತಿ ಸುಜಾತ ಮನೋಹರ್ ಅವರು ಬಾಂಬೆಯ ಉಚ್ಚನ್ಯಾಯಾಲಯದಲ್ಲಿ ಮುಖ್ಯ ನ್ಯಾಯಾಧೀಶೆಯಾಗಿ ಆಯ್ಕೆಯಾಗಿದ್ದಾರೆ. ಮುಖ್ಯ ನ್ಯಾಯಾಧೀಶರ ಸ್ಥಾನ ಪಡೆದ ಮೊದಲ ಮಹಿಳೆ ಇವರು. 1978 ರಿಂದ ಅವರು ಬಾಂಬೆಯ ಉಚ್ಚ ನ್ಯಾಯಾಲಯದಲ್ಲಿ ನ್ಯಾಯಾಧೀಶರಾಗಿ ಕೆಲಸ ಮಾಡಿದ್ದಾರೆ.

ಅವರು 1934, ಆಗಸ್ಟ್ 28ರಂದು ಜನಿಸಿದರು. ಎಲ್‌ಫಿನ್‌ಸ್ಟೋನ್ ಕಾಲೇಜಿನ ವಿದ್ಯಾರ್ಥಿಯಾಗಿ ಅವರು ಉನ್ನತ ವ್ಯಾಸಂಗವನ್ನು ಕೇಂಬ್ರಿಡ್ಜ್‌ನಲ್ಲಿ ಮಾಡಿ ಬ್ಯಾರಿಸ್ಟರ್ ಪದವಿ ಪಡೆದರು.

# ಪಿತೃಪ್ರಧಾನತೆ ಎಂದರೇನು ?

**ಕಮಲಾ ಬಾಸಿನ್**

## ಮುನ್ನುಡಿ

ಕಳೆದ ಹಲವಾರು ವರ್ಷಗಳಿಂದ ಮಹಿಳಾ ಅಭಿವೃದ್ಧಿಯ ವಿವಿಧ ಕಾರ್ಯಕ್ರಮಗಳಲ್ಲಿ ಮತ್ತು ಚಟುವಟಿಕೆಗಳಲ್ಲಿ ಒಳಗೊಳ್ಳುತ್ತಾ ಬಂದಿರುವ ನಾವು ಹಲವಾರು ಮಹಿಳೆಯರನ್ನು ತುಳಿತಕ್ಕೊಳಪಡಿಸಿರುವ, ಅವರ ಮೇಲೆ ಪ್ರಾಬಲ್ಯ ಸಾಧಿಸಿರುವ ವ್ಯವಸ್ಥೆಯನ್ನು ಅರ್ಥ ಮಾಡಿಕೊಂಡು, ಇದು ಕೆಲಸ ಮಾಡುವ ಬಗೆಯನ್ನು ಎಳೆ-ಎಳೆಯಾಗಿ ಬಿಡಿಸುತ್ತಾ ಹೋಗುವುದು ಮಹಿಳೆಯ ಅಭಿವೃದ್ಧಿಗೆ ವ್ಯವಸ್ಥಿತ ರೀತಿಯಲ್ಲಿ ಕೆಲಸ ಮಾಡುವಲ್ಲಿ ಅವಶ್ಯಕವೆಂದು ಕಂಡುಕೊಂಡಿದ್ದೇವೆ. ಅನೇಕ ವರ್ಷಗಳ ವರೆಗೆ ಮಹಿಳೆಯರ ಮೇಲಿನ ದಬ್ಬಾಳಿಕೆಯನ್ನು ನಾನು ಬಿಡಿಬಿಡಿಯಾಗಿಯೇ ನೋಡುತ್ತಿದ್ದೆ. ಇವೆಲ್ಲವನ್ನೂ **ವ್ಯವಸ್ಥೆಯ ಪಿತೃಪ್ರಧಾನ ವ್ಯವಸ್ಥೆಯ ಭಾಗಗಳೆಂಬಂತೆ** ನಾನು ನೋಡಲು ಪ್ರಾರಂಭಿಸಿದಾಗ ಬಿಡಿಗಳೆಲ್ಲಾ ಒಂದು ನಮೂನೆಯನ್ನು ಪಡಕೊಳ್ಳತೊಡಗಿದವು. ಪ್ರಾರಂಭದಲ್ಲಿ ಇದನ್ನು ಅರ್ಥಮಾಡಿಕೊಳ್ಳುವುದು ಸುಲಭವಾಗಿರಲಿಲ್ಲ. ಅಕ್ಯಾಡೆಮಿಕ್ ಅಲ್ಲದ ನನಗೆ ತಕ್ಷಣಕ್ಕೆ ಪರಿಕಲ್ಪನೆಗಳನ್ನು, ಅಮೂರ್ತತೆಗಳನ್ನು ಗ್ರಹಿಸುವ ತರಬೇತಿ ಇರಲಿಲ್ಲ. ಕ್ರಮೇಣ ಅಕಡೆಮಿಕ್‌ಗಳಾದ ಸ್ನೇಹಿತರನ್ನು ಕೇಳಿಸಿಕೊಳ್ಳುತ್ತಾ, ಅಲ್ಲಲ್ಲಿ ಚೂರು-ಪಾರು ಓದುತ್ತಾ ವಿಷಯಗಳು ಸ್ಪಷ್ಟವಾಗತೊಡಗಿದವು. ಕೆಲವು ವರ್ಷಗಳ ಹಿಂದೆ ಬಾಂಗ್ಲಾದೇಶದಲ್ಲಿ ನಾನು ನಡೆಸಿದ ಒಂದು ತಿಂಗಳ ಶಿಬಿರ ನಿಜವಾಗಿಯೂ ನನಗೆ ಸಹಾಯ ಮಾಡಿತು. ಮಹಿಳೆ ಮತ್ತು ಅಭಿವೃದ್ಧಿ ಕುರಿತಾದ ಈ ಶಿಬಿರಕ್ಕೆ ಅಮೃತಾ ಚಾಚಿ (ಸಾಮಾಜಿಕ ಅಧ್ಯಯನ ಸಂಸ್ಥೆ, ಹೇಗ್) ಸಂಪನ್ಮೂಲ ವ್ಯಕ್ತಿಯಾಗಿದ್ದರು. ಶಿಬಿರವು ಅನೇಕ ಸಮಸ್ಯೆಗಳನ್ನು ಮತ್ತು ಪರಿಕಲ್ಪನೆಗಳನ್ನು ಸ್ಪಷ್ಟಗೊಳಿಸಿತು. ನನಗೆ ಮಾತ್ರವಲ್ಲ ಭಾಗವಹಿಸಿದ್ದವರನೇಕರಿಗೆ ಕೂಡ.

ಆವಾಗಿನಿಂದ (1987) ನಾನು ಮಹಿಳೆ ಮತ್ತು ಪುರುಷ ಕಾರ್ಯಕರ್ತರೊಡನೆ, ಹಂಚಿಕೊಳ್ಳಲು ಸಾಧ್ಯವಾಗುವಂತಹ ಪಿತೃಪ್ರಧಾನತೆಯನ್ನು ಕುರಿತ ಸರಳ ಸಂಕ್ಷಿಪ್ತವಾದ ಬರಹಗಳಿಗಾಗಿ ನೋಡುತ್ತಲೇ ಇದ್ದೇನೆ. ನಾನು ಓದಿದವೆಲ್ಲಾ, ಒಂದೋ ಅರ್ಥಮಾಡಿಕೊಳ್ಳಲು ತುಂಬಾ ಕಷ್ಟವಾದಂತವು, ಇಲ್ಲಾ ಪಾರಿಭಾಷಿಕ ಆಡಂಬರಗಳಿಂದ ತುಂಬಿಹೋದಂತಹವು. ಆದ್ದರಿಂದ ನಾನು ನನ್ನದೇ ಟಿಪ್ಪಣಿಗಳ ಮತ್ತು ಬಾಂಗ್ಲಾದೇಶದಲ್ಲಿ ಅಮೃತಾ ನೀಡಿದ ಉಪನ್ಯಾಸದ ಸಹಾಯದಿಂದ ಬೇರೆ ಬೇರೆ ಶಿಬಿರಗಳಲ್ಲಿ ಪಿತೃಪ್ರಧಾನತೆಯ ಮೇಲೆ ಚರ್ಚೆ ಬೆಳೆಸಲು ಪ್ರಾರಂಭಿಸಿದೆ. ಈ ಚರ್ಚೆಗಳಿಂದ ನನ್ನ ಗ್ರಹಿಕೆಯೇ ಹೆಚ್ಚು ಸ್ಪಷ್ಟವಾಗತೊಡಗಿತು. ಮತ್ತು ತುಂಬಾ ಒಳ್ಳೆಯ ಕೆಲವು ಲೇಖನಗಳು, ಪುಸ್ತಕಗಳು ಕೂಡ ನನಗೆ ಸಿಕ್ಕಿದುವು. ನಾನು ಓದಿದ, ಇಷ್ಟಪಟ್ಟ ಮತ್ತು ಅರ್ಥಮಾಡಿಕೊಂಡ ಎಲ್ಲವನ್ನೂ ಒಂದು ಸರಳ ರೀತಿಯಲ್ಲಿ, ಉಪಯುಕ್ತ ರೀತಿಯಲ್ಲಿ ನಿರೂಪಿಸಲು ಪ್ರಯತ್ನಿಸಬೇಕೆಂದು ತೀರ್ಮಾನಿಸಿದೆ. ಈ ಪುಸ್ತಿಕೆಯಲ್ಲಿ ಪಿತೃಪ್ರಧಾನತೆಯನ್ನು. **ನಾವು ನಮ್ಮ ಬದುಕುಗಳಲ್ಲಿ ಅನುಭವಿಸುವ ಮತ್ತು ಮಹಿಳೆಯರ ದಾಸ್ಯವನ್ನು ವಿವರಿಸುವ ಒಂದು ಪರಿಕಲ್ಪನೆ**ಯಾಗಿ ನೋಡಲು ಪ್ರಯತ್ನಿಸಿದ್ದೇನೆ. (ಅದರ ಉಗಮವನ್ನು ಕುರಿತ ಹಲವು ಥಿಯರಿಗಳನ್ನು ಇಲ್ಲಿ ಪರಿಚಯಿಸಲಾಗಿದೆ. ಆದರೆ ಅವು ತುಂಬಾ ಸಂಕ್ಷಿಪ್ತವಾಗಿವೆ. ಇನ್ನೂ ಹೆಚ್ಚು ಅರ್ಥಮಾಡಿಕೊಳ್ಳಬೇಕಾದರೆ ಮುಂದುವರೆದ ಓದು ಅವಶ್ಯಕ.) ಪುಸ್ತಕಗಳು ಮತ್ತು ಪತ್ರಿಕೆಗಳನ್ನು ಪಡೆಯಲಿಕ್ಕಾಗಲೀ ಇಲ್ಲವೇ ಅವೆಲ್ಲವನ್ನು - ಓದುವ ಸಮಯ ಹೊಂದಿಸಿಕೊಳ್ಳಲಿಕ್ಕಾಗಲೀ ಕಷ್ಟವಿರುವ ಕಾರ್ಯಕರ್ತರನ್ನು ಮನಸ್ಸಿನಲ್ಲಿಟ್ಟುಕೊಂಡಿದೆ ಈ ಪುಸ್ತಿಕೆ. ಆದರೆ ನಾನು ಇಲ್ಲಿ ಆಕರವಾಗಿ ಬಳಸಿಕೊಂಡಿರುವ ಬರಹಗಾರರ ಕೃತಿಗಳು ಕೆಲವರನ್ನಾದರೂ ವಿಷಯದ ಬಗ್ಗೆ ಹೆಚ್ಚಿನ ಓದಿಗೆ ಪ್ರೇರೇಪಿಸಬಹುದು. ನಮಗೆ ತುಂಬಾ ಅವಶ್ಯಕವಾಗಿ ಬೇಕಾಗಿರುವದೆಂದರೆ ದಕ್ಷಿಣ ಏಶಿಯಾದಲ್ಲಿ ಪಿತೃಪ್ರಧಾನತೆಯ ಸ್ವರೂಪ ಉಗಮ ಮತ್ತು

ಮೂಲಗಳನ್ನು ಕುರಿತ ಹೆಚ್ಚು ಸೈದ್ಧಾಂತಿಕವಾದ ಕೃತಿಗಳು. ಹಾಗಾದಾಗ ನಮ್ಮದೇ ಸನ್ನಿವೇಶ-ಸ್ಥಿತಿಗತಿಗಳನ್ನು ನಾವು ಅರ್ಥಮಾಡಿಕೊಳ್ಳುವುದು ಸಾಧ್ಯವಾಗುತ್ತದೆ.

ಇಲ್ಲಿ ನಾನು ನನ್ನ ಹಿಂದಿನ ಪುಸ್ತಿಕೆ, 'ಸ್ತ್ರೀವಾದದಕ್ಷಿಣ ಏಷಿಯಾದಲ್ಲಿ ಅದರ ಪ್ರಸ್ತುತತೆ'ಯಲ್ಲಿ ಬಳಸಿದ ರೀತಿಯಲ್ಲಿಯೇ ಪ್ರಶ್ನೆ-ಉತ್ತರದ ವಿಧಾನವನ್ನು ಬಳಸಿದ್ದೇನೆ. ಇದು ಸರಾಗವಾಗಿ ಓದಿಸಿಕೊಂಡು ಹೋಗಬಲ್ಲದು.

---

ಮಹಿಳೆಯರು ದಬ್ಬಾಳಿಕೆಗೆ ಒಳಗಾಗಿರುವ ವಿವಿಧ ಬಗೆಗಳನ್ನು ನಾವು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಾ ಬಂದಿದ್ದೇವೆ, ನಮ್ಮದೇ ಅನುಭವ ಮತ್ತು ಗ್ರಹಿಕೆಗಳಿಂದ. ಹಾಗೆಯೇ ಅದಕ್ಕೊಂದು ಸೈದ್ಧಾಂತಿಕ ನೆಲೆಗಟ್ಟನ್ನು ನಿರ್ಮಾಣ ಮಾಡಲು ಪ್ರಯತ್ನಿಸಿದ್ದೇವೆ. ಕಳೆದ ಹದಿನೈದು–ಇಪ್ಪತ್ತು ವರ್ಷಗಳಿಂದಲೂ ಮಹಿಳಾ ಪ್ರಶ್ನೆಯಲ್ಲಿ ಕಳಕಳಿ ಹೊಂದಿರುವ ಎಲ್ಲರೂ ತಮ್ಮದೇ ಮಿತಿ-ಸಾಮರ್ಥ್ಯಗಳಿಂದ ಇದನ್ನು ನಿರ್ವಹಿಸಲು ಪ್ರಯತ್ನಿಸಿದ್ದೇವೆ. ಹೀಗಿದ್ದೂ ಎಷ್ಟೋ ಸಮಯಗಳಲ್ಲಿ ಅನುಭವಕ್ಕೆ ದಕ್ಕಿದ್ದನ್ನು ವಿಸ್ತಾರ ಸೈದ್ಧಾಂತಿಕ ಚೌಕಟ್ಟಿನೊಳಗಡೆ ಅದರೆಲ್ಲಾ ಸೂಕ್ಷ್ಮತೆಗಳೊಟ್ಟಿಗೆ ಹಿಡಿದಿಡಲಾಗದೆಯೇ ತೀರಾ ವ್ಯಾಖ್ಯವಾಗಿಸಿಬಿಡುತ್ತೇವೆ, ಒರಟರಾಗಿ ಬಿಡುತ್ತೇವೆ. ಆದ್ದರಿಂದಲೇ ಇವತ್ತಿಗೂ ನಮ್ಮಲ್ಲಿ ಅನೇಕರು 'ಹೆಣ್ಣಿಗೆ ಹೆಣ್ಣೇ ಶತ್ರು' ಎಂದು ವಾದಿಸುತ್ತೇವೆ. ಪುರುಷ ಮತ್ತು ಮಹಿಳೆ ಎನ್ನುವುದನ್ನು ಸಂಪೂರ್ಣ ನೇರಾರ್ಥದಲ್ಲಿ ತೆಗೆದುಕೊಳ್ಳುವುದರಿಂದಲೇ ಇಂತಹ 'ಅನಾಹುತ'ಗಳಿಗೆ ಎಡೆಯುಂಟಾಗುವುದು. ಪುರುಷ–ಮಹಿಳೆಯರೆಲ್ಲರೂ ಪಿತೃಪ್ರಧಾನ ವ್ಯವಸ್ಥೆಯೊಂದರ ಭಾಗವಾಗಿದ್ದು, ಅವರ ಕ್ರಿಯೆಗಳೆಲ್ಲಾ ಈ ಮೂಲದಿಂದಲೇ ಹೇಗೆ ಅರಳಿಕೊಳ್ಳುತ್ತವೆ ಎಂಬುದನ್ನು ನಾವಿನ್ನೂ ಹೆಚ್ಚು ಸ್ಪಷ್ಟವಾಗಿ, ವಿಶಾಲವಾಗಿ ಅರ್ಥಮಾಡಿಕೊಳ್ಳಬೇಕಾಗಿದೆ.

ಇಂತಹದನ್ನು ನಿರ್ವಹಿಸಬೇಕೆಂದು 'ಮಾನಸ' ದಲ್ಲಿ ಕೆಲ ಸಮಯದಿಂದಲೂ ಯೋಚಿಸಿಕೊಂಡೆ ಇದ್ದೆವು. ನಮ್ಮ ಅನೇಕ ಸ್ನೇಹಿತರು, ಓದುಗರು ಕೂಡ ಇಂಥದನ್ನು ಎದುರು ನೋಡುತ್ತಿದ್ದರು. ಹೀಗಿದ್ದ ಸಮಯದಲ್ಲಿ ಕಮಲಾ ಬಾಸಿನರ "ಪಿತೃಪ್ರಧಾನತೆ ಎಂದರೇನು ?" (what is patriarchy ?) ಎನ್ನುವ ಅತ್ಯಂತ ಸಮಯೋಚಿತ ಪುಸ್ತಿಕೆ ಹೊರಬಂದಿದೆ. ದೈನಂದಿನ ಬದುಕಿನ ಕ್ಷಣಕ್ಷಣದಲ್ಲೂ ವ್ಯಕ್ತಗೊಳ್ಳುವ ಪಿತೃಪ್ರಧಾನತೆಯ ಭಿನ್ನ–ಭಿನ್ನ ಮುಖಗಳನ್ನು ಎಳೆಎಳೆಯಾಗಿ ಅನಾವರಣ ಮಾಡುತ್ತಾ, ಮಹಿಳೆಯರ ಮೇಲಿನ ದಬ್ಬಾಳಿಕೆಯನ್ನು ಅರ್ಥಮಾಡಿಕೊಳ್ಳುವ ಸೈದ್ಧಾಂತಿಕ ಚೌಕಟ್ಟನ್ನು ನಿರ್ಮಾಣ ಮಾಡುತ್ತದೆ. ಪಿತೃಪ್ರಧಾನತೆಯ ಹುಟ್ಟು, ಪ್ರಪಂಚದ ಬೇರೆ, ಬೇರೆ ಕಡೆಗಳಲ್ಲಿ ಅದು ಚಾರಿತ್ರಿಕವಾಗಿ ವಿಕಸನಗೊಂಡ ಕ್ರಮಗಳ ವಿವರಣೆಯನ್ನೂ ಈ ಪುಸ್ತಿಕೆ ಕೊಡುತ್ತದೆ. ದೊಡ್ಡ ದೊಡ್ಡ ಸಾಮಾಜಿಕ ಮತ್ತು ರಾಜಕೀಯ ಸಂಸ್ಥೆಗಳ ಪಿತೃಪ್ರಧಾನ ಹಿಡಿತವು ಮಹಿಳೆಯರೆಡೆಗೆ ವ್ಯವಸ್ಥಿತ ತಾರತಮ್ಯವನ್ನು ಉಂಟುಮಾಡುತ್ತಿರುವಂತಹ ಸನ್ನಿವೇಶದಲ್ಲಿ ಮಹಿಳೆಯರೂ ಪರಿವರ್ತನೆಗಾಗಿನ ಹೋರಾಟವನ್ನು ಗುರುತಿಸುವುದು ಕೂಡ ಇಲ್ಲಿನ ಪ್ರಯತ್ನವಾಗಿದೆ. ಹುಡುಕುತ್ತಿದ್ದದ್ದು ಅಂಗೈಗೇ ಬಂದಂತೆ ಹೊರಬಂದಿರುವ ಈ ಪುಸ್ತಿಕೆಯನ್ನು ಎರಡು ಯೋಚಿಸದೆಯೇ ಅನುವಾದಿಸಿ ಓದುಗರಿಗೆ ಒದಗಿಸಲು ತೀರ್ಮಾನಿಸಿದ್ದೇವೆ. 40 ಪುಟಗಳ ಈ ಪುಸ್ತಿಕೆ ನಾಲ್ಕು ಕಂತುಗಳ ಸರಣಿಯಲ್ಲಿ ಪ್ರಕಟಗೊಳ್ಳುತ್ತದೆ.

ಮಹಿಳಾ ಚಳವಳಿಯಲ್ಲಿ ತುಂಬಾ ಗಮನಾರ್ಹ ಹೆಸರು ಕಮಲಾಬಾಸಿನರದು. ಮಹಿಳೆ ಮತ್ತು ಅಭಿವೃದ್ಧಿ, ಮಹಿಳೆ ಮತ್ತು ಮಾಧ್ಯಮ, ಮಹಿಳೆ ಮತ್ತು ಶಿಕ್ಷಣ ಇತ್ಯಾದಿಗಳನ್ನು ಕುರಿತು ತುಂಬಾ ವಿಸ್ತಾರವಾಗಿ ಬರೆದಿರುವ ಕಮಲಾ ಬಾಸಿನರದು ಕಬ್ಬಿಣದ ಕಡಲೆಯನ್ನು ಮೃದುವಾಗಿಸಿ ಉಣಿಸುವ ವಿಶಿಷ್ಟ ಶೈಲಿಯ ಬರವಣಿಗೆ. ಇವರ "ಸ್ತ್ರೀವಾದ–ದಕ್ಷಿಣ ಏಶಿಯಾದಲ್ಲಿ ಅದರ ಪ್ರಸ್ತುತತೆ" ಇಂತಹ ಬರವಣಿಗೆಗೊಂದು ದ್ಯೋತಕವಾಗಿದ್ದು ಈಗಾಗಲೇ ಕನ್ನಡಾನುವಾದಗೊಂಡಿದೆ. ಹಾಡುಗಳನ್ನು, ಮಕ್ಕಳ ಶಿಕ್ಷಣದ ಬಗ್ಗೆ ಪುಸ್ತಕಗಳನ್ನೂ ಬರೆದಿರುವ ಕಮಲಾ ಬಾಸಿನ್ FAO (ಆಹಾರ ಮತ್ತು ಕೃಷಿ ಸಂಸ್ಥೆಯಲ್ಲಿ) ಕೆಲಸ ಮಾಡುತ್ತಾರೆ.

**ಸಂ. ಮಂ.**

---

**ಪ್ರ : ಪಿತೃಪ್ರಧಾನತೆ ಎಂಬುದರ ಅರ್ಥವೇನು ?**

ಉ : ಪಿತೃಪ್ರಧಾನತೆ ಎಂಬುದು ನೇರವಾಗಿ ತಂದೆಯ ಅಥವಾ ಪ್ರಜಾಪ್ರಭುತ್ವದ ಯಜಮಾನಿಕೆ ಎಂಬರ್ಥವನ್ನು ಕೊಡುತ್ತದೆ. ಹೆಂಗಸರು, ಕಿರಿಯ ಗಂಡಸರು, ಮಕ್ಕಳು. 'ಗುಲಾಮರು ಮತ್ತು ಮನೆಕೆಲಸದವರು ಎಲ್ಲರನ್ನೂ ಒಳಗೊಂಡು ಪುರುಷರೊಬ್ಬರ ಅಧೀನದಲ್ಲಿರುವ 'ಪುರುಷ-ಪ್ರಾಧಾನ್ಯ ಕುಟುಂಬ'ವನ್ನು ವರ್ಣಿಸಲು ಮೊದಲಿಗೆ ಇದನ್ನು ಬಳಸಲಾಯಿತು. ಈಗ ಇದನ್ನು ಪುರುಷ ಪ್ರಾಬಲ್ಯತೆ, ಪುರುಷನು ಮಹಿಳೆಯ ಮೇಲೆ ತನ್ನ ಹಿಡಿತ ಸಾಧಿಸುವ ಅಧಿಕಾರ ಸಂಬಂಧಗಳು ಮತ್ತು ಮಹಿಳೆಯನ್ನು ಬಹು ಬಗೆಯಲ್ಲಿ ದಬ್ಬಾಳಿಕೆಗೊಳಪಡಿಸುವ ವ್ಯವಸ್ಥೆಯನ್ನು ಕುರಿತು ಹೇಳಲು ಬಳಸಲಾಗುತ್ತಿದೆ. ದಕ್ಷಿಣ ಏಶಿಯಾದಲ್ಲಿ, ಉದಾಹರಣೆಗೆ ಹೇಳಬೇಕೆಂದರೆ ಹಿಂದಿಯಲ್ಲಿ ಇದನ್ನು 'ಪಿತೃಸತ್ತಾ' ಎಂತಲೂ, ಉರ್ದುವಿನಲ್ಲಿ 'ಪಿತರ್‌ಶಾಹಿ' ಎಂತಲೂ ಮತ್ತು ಬಾಂಗ್ಲಾದಲ್ಲಿ 'ಪಿತೃತಂತ್ರೋ' ಎಂತಲೂ ಹೇಳಲಾಗುತ್ತದೆ.

ನಮ್ಮ ವರ್ಗ ಹಿನ್ನೆಲೆ ಏನೇ ಇರಲಿ, ದಿನಂಪ್ರತಿಯ ಬದುಕಿನಲ್ಲಿ ನಾವು ಅನುಭವಿಸುವ ದಬಾವಣೆಯು ಬಹುಮುಖೀ ಸ್ವರೂಪದ್ದು. ತಾರತಮ್ಯ, ನಿರ್ಲಕ್ಷ್ಯ, ಅಪಮಾನ, ನಿಯಂತ್ರಣ, ಶೋಷಣೆ, ದಮನ, ಹಿಂಸೆ ಇವೆಲ್ಲವೂ ಕುಟುಂಬದಲ್ಲೂ, ಕೆಲಸದ ಸ್ಥಳದಲ್ಲೂ, ಸಮಾಜದಲ್ಲೂ ನಮ್ಮ ಅನುದಿನದ ಸಂಗಾತಿಗಳು. ಇವುಗಳ ವಿವರಗಳು ಭಿನ್ನವಾಗಿರಬಹುದು. ಆದರೆ ವಿಷಯ ಮಾತ್ರ ಒಂದೇ.

**ಪ್ರ : ಪಿತೃಪ್ರಧಾನತೆ ಪ್ರಕಟಗೊಳ್ಳುವ ರೀತಿ ಎಂತಹದ್ದು ? ನಮ್ಮ ಬದುಕಿನಲ್ಲಿ ಅದನ್ನು ಗುರುತಿಸಲು ಸಾಧ್ಯವೇ ?**

ಉ : ತಾರತಮ್ಯ, ತಿರಸ್ಕಾರ, ನಿರ್ಲಕ್ಷ್ಯಗಳನ್ನು ಸೂಕ್ಷ್ಮರೀತಿಯಲ್ಲಿ ಅನುಭವಿಸಿರುವವರು ಕೂಡ ಇದನ್ನು ಬಲ್ಲರು, ಹೀಗೇ ಎಂದು ಹೆಸರಿಸಿ ಹೇಳಲಾಗದಿದ್ದರೂ. ಶಿಬಿರಗಳಲ್ಲಿ, ತರಭೇತಿಗಳಲ್ಲಿ ಮಹಿಳೆಯರು ಮಹಿಳೆಯರಿಗಾಗಿ ತಮ್ಮ ಅನುಭವಗಳನ್ನು ಕುರಿತು ಹೇಳುವಾಗಲೆಲ್ಲಾ, ತಾವು ವೈಯಕ್ತಿಕವಾಗಿ ಅನುಭವಿಸಿರುವ ಪೇಟ್ರಿಯಾರ್ಕಲ್ ದಬ್ಬಾಳಿಕೆಯ ವಿವಿಧ ಸ್ವರೂಪಗಳನ್ನು ವಿವರಿಸಿದ್ದಾರೆ. ನಾನೇನು ಹೇಳುತ್ತಿರುವೆನೆಂಬುದನ್ನು ಕೆಲವು ಉದಾಹರಣೆಗಳು ಸ್ಪಷ್ಟಪಡಿಸಬಲ್ಲುವು. ಇದರಲ್ಲಿ ಪ್ರತಿಯೊಂದು ನಿರ್ದಿಷ್ಟ ಬಗೆಯ ತಾರತಮ್ಯ ಮತ್ತು ಪಿತೃಪ್ರಧಾನತೆಯ ನಿರ್ದಿಷ್ಟ ಅಂಶವೊಂದನ್ನು ಪ್ರತಿನಿಧಿಸುತ್ತವೆ. "ನಾನು ಹುಟ್ಟಿದಾಗ ನನ್ನ ಕುಟುಂಬಕ್ಕೆ ಸಂತೋಷವಾಗಲಿಲ್ಲವಂತೆ. ಅವರಿಗೆ ಗಂಡು ಮಗು ಬೇಕಾಗಿತ್ತಂತೆ." (ಗಂಡು ಮಕ್ಕಳನ್ನು ಬಯಸುವಿಕೆ).

"ನನ್ನ ಸಹೋದರರು ಊಣಿಸನ್ನು ಒತ್ತಾಯಿಸಬಹುದಾಗಿತ್ತು, ಕೈಚಾಚಿ ತಮಗೆ ಬೇಕಾದ್ದನ್ನು ತೆಗೆದುಕೊಳ್ಳಬಹುದಾಗಿತ್ತು. ನಾವು ಮಾತ್ರ ಕೊಡುವವರೆಗೂ ಕಾಯಬೇಕೆಂದು ಹೇಳಲಾಗುತ್ತಿತ್ತು. ನಾವು ಅಕ್ಕತಂಗಿಯರು ಮತ್ತು ನಮ್ಮ ತಾಯಿ ಕಳೆದುಳಿದದ್ದನ್ನು ಉಣ್ಣಬೇಕಾಗಿತ್ತು" (ಆಹಾರದಲ್ಲಿ ಹೆಣ್ಣು ಮಕ್ಕಳಿಗೆ ತಾರತಮ್ಯ.)

"ಮನೆಕೆಲಸದಲ್ಲಿ ನಾನು ನನ್ನ ತಾಯಿಗೆ ಸಹಾಯ ಮಾಡಬೇಕು, ನನ್ನ ಅಣ್ಣತಮ್ಮಂದಿರಿಗೇನೂ ಇಂತಹ ಪ್ರಮೇಯವಿಲ್ಲ" (ಹೆಂಗಸರು ಮತ್ತು ಹೆಣ್ಣುಮಕ್ಕಳ ಮೇಲೆ ಮನೆಕೆಲಸದ ಹೊರೆ.)

"ಶಾಲೆಗೆ ಹೋಗುವದೊಂದು ಹೋರಾಟವಾಗಿತ್ತು. ನಾವು ಹೆಣ್ಣು ಮಕ್ಕಳು ಕಲಿಯುವ ಅವಶ್ಯಕತೆ ಇಲ್ಲವೆಂದು ನಮ್ಮ ತಂದೆಯವರು ತಿಳಿದಿದ್ದರು." (ಹೆಣ್ಣು ಮಕ್ಕಳಿಗೆ ಶಿಕ್ಷಣಾವಕಾಶದಿಂದ ವಂಚನೆ.)

"ಗೆಳತಿಯರನ್ನು ಭೇಟಿ ಮಾಡಲು ಹೋಗುವುದೂ ನನಗೆ ಸಾಧ್ಯವಿರಲಿಲ್ಲ. ನನ್ನ ಅಣ್ಣಂದಿರು ಯಾವಾಗ ಬೇಕಾದರೂ ಮನೆಗೆ ಬರಬಹುದಾಗಿತ್ತು. ಆದರೆ ನಾನು ಮಾತ್ರ ಕತ್ತಲಾಗುವುದರೊಳಗೆ ಮನೆ ಸೇರಬೇಕು." (ಹೆಣ್ಣುಮಕ್ಕಳ ಚಲನ - ವಲನಗಳ ಮೇಲಿನ ನಿಯಂತ್ರಣ.)

"ನನ್ನ ತಂದೆ ನನ್ನ ತಾಯಿಯನ್ನು ಹೊಡೆಯುತ್ತಿದ್ದರು" (ಹೆಂಡತಿಯನ್ನು ಹೊಡೆಯುವುದು) "ನನ್ನ ಅಣ್ಣಂದಿರು ನನ್ನಪ್ಪನಿಗಿಂತಲೂ ಕಡೆ. ನಾನು ಯಾವುದೇ ಗಂಡಸಿನೊಟ್ಟಿಗೆ ಮಾತನಾಡುವುದನ್ನು ಅವರು ಸಹಿಸುವುದಿಲ್ಲ" (ಮಹಿಳೆ ಮತ್ತು ಹೆಣ್ಣುಮಕ್ಕಳ ಮೇಲೆ ಪುರುಷ ನಿಯಂತ್ರಣ.)

"ನಾನು ನನ್ನ ಮೇಲಧಿಕಾರಿಗಳಿಗೆ ಅನುಕೂಲೆಯಾಗಿ ನಡೆದುಕೊಳ್ಳದೇ ಹೋದದ್ದರಿಂದ ನನ್ನನ್ನು ಕೆಲಸದಿಂದ ತೆಗೆದುಹಾಕಲಾಯಿತು" (ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳ)

"ನಮ್ಮಪ್ಪನ ಆಸ್ತಿಯಲ್ಲಿ ನನಗೆ ಪಾಲಿಲ್ಲ. ನನ್ನ ಗಂಡನ ಆಸ್ತಿ ಕೂಡ ನನ್ನದಲ್ಲ. ನಿಜದಲ್ಲಿ ನನ್ನದೆಂದು ಹೇಳಿಕೊಳ್ಳಬಲ್ಲಂಥ ಮನೆ ನನಗಿಲ್ಲ" (ಮಹಿಳೆಯರಿಗೆ ಆಸ್ತಿಯು ಹಕ್ಕು, ಉತ್ತರಾಧಿಕಾರತ್ವಗಳು ಇಲ್ಲದಿರುವುದು.)

ನನ್ನ ಗಂಡನಿಗೆ ಬೇಕೆನಿಸಿದಾಗಲೆಲ್ಲಾ ನಾನು ನನ್ನ ದೇಹವನ್ನು ಅವನಿಗೆ ಅರ್ಪಿಸಿಕೊಳ್ಳಬೇಕು. ನನಗೆ ಲೈಂಗಿಕತೆಯೆಂದರೆ ಭಯ. ನಾನದನ್ನು ಸುಖಿಸುವುದಿಲ್ಲ" (ಮಹಿಳೆಯರ ದೇಹ ಮತ್ತು ಲೈಂಗಿಕತೆಗಳ ಮೇಲಿನ ಪುರುಷ ನಿಯಂತ್ರಣ).

"ನನ್ನ ಗಂಡ ಕುಟುಂಬ ಯೋಜನಾ ವಿಧಾನಗಳನ್ನು ಬಳಸಬೇಕೆಂದು ನಾನು ಬಯಸಿದೆ. ಆದರೆ ಆತ ನಿರಾಕರಿಸಿದ. ನಾನು ಶಸ್ತ್ರ ಚಿಕಿತ್ಸೆ ಮಾಡಿಸಿಕೊಳ್ಳುವುದಕ್ಕೂ ಅವನೊಪ್ಪಲಿಲ್ಲ" (ಫಲಶಕ್ತಿ ಅಥವಾ ಸಂತಾನೋತ್ಪತ್ತಿ ಹಕ್ಕುಗಳ ಮೇಲೆ ಹಿಡಿತವಿಲ್ಲದಿರುವಿಕೆ).

ಹೀಗೆ, ಇಂತಹವುಗಳನ್ನು ಕುರಿತು ಚಿಂತಿಸುತ್ತಾ ಹೋದಂತೆ ಅಲ್ಲಲ್ಲಿನ ಈ ಅನುಭವಗಳು ನಿಧಾನಕ್ಕೆ ಒಂದು ನಮೂನೆಯನ್ನೂ ರೂಪಿಸತೊಡಗುತ್ತವೆ. ನಾವು ಪ್ರತಿಯೊಬ್ಬರೂ ಈ ತಾರತಮ್ಯದ ವಿರುದ್ಧ ಒಂದಿಲ್ಲಾ ಒಂದು ಬಗೆಯಲ್ಲಿ ಹೋರಾಡಬೇಕಾಗಿ ಬಂದಿರುವುದು ನಮ್ಮೆದುರಿಗೆ ಬರುತ್ತದೆ. ದಮನಕಾರೀ ಅನುಭವಗಳು ನಮ್ಮ ಆತ್ಮಗೌರವವನ್ನೂ ಆತ್ಮಾಭಿಮಾನವನ್ನೂ ನಾಶ ಮಾಡಿ ನಮ್ಮ ಆಶಯುಗಳ ಮೇಲೆ ಮಿತಿಗಳನ್ನೊಡುತ್ತವೆ. ನಮ್ಮನ್ನು ನಾವು ಪ್ರತಿಪಾದಿಸಿಕೊಳ್ಳುವಂತಹ ಯಾವುದೇ ದಿಟ್ಟ ಚರ್ಯೆಗಳನ್ನು **"ಸ್ತ್ರೀ ಸಹಜವಲ್ಲದ್ದು"** ಎಂದು ಖಂಡಿಸಲಾಗುತ್ತದೆ. ನಮಗಾಗಿ ಹೇಳಿಡಲ್ಪಟ್ಟ ಪಾತ್ರಗಳಿಂದ, ಅವಕಾಶಗಳಿಂದ ಹೊರಗಡಿ ಇಟ್ಟಾಕ್ಷಣವೇ ನಮ್ಮನ್ನು ನಾಚಿಕೆಗೆಟ್ಟವರೆಂದು ಕರೆಯಲಾಗುತ್ತದೆ.

ನಮ್ಮನ್ನು ಪುರುಷರಿಗಿಂತ ಕೀಳೆಂದು ವರ್ಣಿಸುತ್ತಾ ನಮ್ಮ ಮೇಲೆ ನಿಯಂತ್ರಣ ಹೇರುವ ಕಟ್ಟುಕಟ್ಟಳೆಗಳು, ವಿಧಿವಿಧಾನಗಳು ಎಲ್ಲೆಲ್ಲೂ ಕಂಡು ಬರುತ್ತವೆ : ನಮ್ಮ ಕುಟುಂಬಗಳಲ್ಲಿ, ಸಾಮಾಜಿಕ ಸಂಬಂಧಗಳಲ್ಲಿ, ಧರ್ಮಗಳಲ್ಲಿ, ಕಾನೂನುಗಳಲ್ಲಿ, ಶಾಲೆಗಳಲ್ಲಿ, ಪಠ್ಯಪುಸ್ತಕಗಳಲ್ಲಿ, ಮಾಧ್ಯಮಗಳಲ್ಲಿ, ಫ್ಯಾಕ್ಟರಿಗಳಲ್ಲಿ, ಕಛೇರಿಗಳಲ್ಲಿ.

ನಾವು ಪರಸ್ಪರರ ಅನುಭವಗಳನ್ನು ಕೇಳುತ್ತಾ ಹೋದಂತೆ, ಈ ತೊತ್ತುಗಾರಿಕೆಯು ಕೆಲವೇ ದುರದೃಷ್ಟದವರ ಹಣೇ ಬರಹವೂ ಅಲ್ಲ, ಕೆಲವೇ 'ಕೆಟ್ಟ' ಗಂಡಸರು ಕೆಲವು ಹೆಂಗಸರನ್ನು ಶೋಷಿಸುವ ಇಲ್ಲವೇ ತುಳಿಯುವ ಸಂಗತಿಯೂ ಅಲ್ಲ ಎಂಬುದೂ ನಮಗೆ ಅರ್ಥವಾಗುತ್ತದೆ. ನಮ್ಮ ವಿರೋಧಿಯಾಗಿರುವುದು ಒಂದು ವ್ಯವಸ್ಥೆ. ಪುರುಷ ಪ್ರಾಬಲ್ಯದ, ಪುರುಷ ಶ್ರೇಷ್ಠತೆಯ ವ್ಯವಸ್ಥೆ, ಪುರುಷ ನಿಯಂತ್ರಣದಲ್ಲಿರುವ ಹೊಂದಿರುವ ಮಹಿಳೆಯರನ್ನು ತೊತ್ತಾಗಿಸಿರುವ ವ್ಯವಸ್ಥೆ ಎಂಬುದನ್ನೂ ನಾವು ಅರ್ಥಮಾಡಿಕೊಳ್ಳುತ್ತೇವೆ.

**ಪ್ರ : ಪಿತೃಪ್ರಧಾನತೆ ಎನ್ನುವ ಪಾರಿಭಾಷಿಕಶಬ್ದವು ನಮ್ಮ ಸುತ್ತಲಲ್ಲಿ ಯಾವಾಗಲೂ ಕಂಡುಬರುವ ಪುರುಷ ಪ್ರಾಧಾನ್ಯತೆಯನ್ನೆಲ್ಲಾ ಕ್ರೋಡೀಕರಿಸಿ ಹೇಳುವಂಥದ್ದೇ ಆಗಿದೆಯೇನು ?**

**ಉ ;** ಹೌದು, ಹಾಗೆಂದೇ ಹೇಳಬಹುದು. ಆದರೆ ಅದೊಂದು ಪಾರಿಭಾಷಿಕಶಬ್ದವಷ್ಟೇ ಅಲ್ಲ, ಅದಕ್ಕಿಂತ ಹೆಚ್ಚಿನದು. ಸ್ತ್ರೀವಾದಿಗಳು ಇದನ್ನೂ ಒಂದು ಪರಿಕಲ್ಪನೆಯಾಗಿ ಬಳಸುತ್ತಾರೆ. ಬೇರೆ ಎಲ್ಲಾ ಪರಿಕಲ್ಪನೆಗಳಿಗಿಂತ, ನಮ್ಮ ವಾಸ್ತವಗಳನ್ನು ಅರ್ಥ ಮಾಡಿಕೊಳ್ಳಲು ಇದು ಒಂದು ಸಾಧನ. ಬೇರೆ ಬೇರೆಂತುವರು ಇದನ್ನೂ ಬೇರೆ ಬೇರೆ ರೀತಿಯಲ್ಲಿ ವ್ಯಾಖ್ಯಿಸಿದ್ದಾರೆ. ಜೂಲಿಯಟ್‌ಮಿಚಿಲ್ ಎನ್ನುವ ಮನೋಶಾಸ್ತ್ರಜ್ಞೆಯಾದ ಸ್ತ್ರೀವಾದಿಯು, ಪುರುಷರು ಮಹಿಳೆಯರನ್ನೂ ವಿನಿಮಯಿಸಿಕೊಳ್ಳುವ ವಾಂಶಿಕತೆ (kinship) ಪದ್ಧತಿ ಮತ್ತು ಇಂತಹ ಪದ್ಧತಿಗಳೊಳಗಡೆ ತಂದೆ ಹೊಂದಿರುವ ಸಾಂಕೇತಿಕ ಅಧಿಕಾರಕ್ಕೆ ಅನ್ವಯಿಸಿ ಪಿತೃಪ್ರಧಾನತೆ ಎಂಬ ಪದವನ್ನು ಬಳಸುತ್ತಾರೆ. ಈ ಅಧಿಕಾರವೇ ಮಹಿಳೆಯರಲ್ಲಿನ 'ಕೀಳರಿಮೆ' ಮನೋಭಾವಗಳಿಗೆ ಕಾರಣವೆನ್ನುತ್ತಾರೆ ಆಕೆ. ಸಿಲ್ವಿಯಾ ವಾಲ್ಬಿ ಎನ್ನುವ ಲೇಖಕಿ ತನ್ನ Theorising patriarchy ಎನ್ನುವ ಪುಸ್ತಕದಲ್ಲಿ "ಪುರುಷರು ಮಹಿಳೆಯರ ಮೇಲೆ ಪ್ರಭುತ್ವ ಸಾಧಿಸುವ, ಅವರನ್ನು ತುಳಿ

ಯುವ, ಶೋಷಿಸುವ ಆಚರಣೆಗಳನ್ನೂ ಸಾಮಾಜಿಕ ರಚನೆಗಳನ್ನೂ ಹೊಂದಿರುವ ಪದ್ಧತಿಯೇ ಪಿತೃಪ್ರಧಾನತೆ" ಎನ್ನುತ್ತಾರೆ. ನಾನು ಈ ಹಿಂದೆಯೇ ಹೇಳಿದಂತೆ, ಜತೆಗೆ ಸಿಲ್ವಿಯಾ ವಾಲ್ಬಿ ಮತ್ತೆ ನೆನಪಿಸುವಂತೆ **ಪಿತೃಪ್ರಧಾನತೆಯನ್ನು ಒಂದು ವ್ಯವಸ್ಥೆಯಾಗಿ ಅರ್ಥಮಾಡಿಕೊಳ್ಳುವುದು ಮುಖ್ಯ.** ಏಕೆಂದರೆ ಇದು ದೈಹಿಕತೆಗೆ ಆರೋಪಿಸುವ ನಿರ್ಧಾರಗಳನ್ನು ಎತ್ತಿ ಹಿಡಿಯುವ ಪ್ರತಿಪಾದನೆಗಳನ್ನು ತಿರಸ್ಕರಿಸಲು, ಕೈಬಿಡಲು ನಮಗೆ ಸಹಾಯ ಮಾಡುತ್ತದೆ. (ಈ ಪ್ರತಿಪಾದನೆಯು, ಪುರುಷ ಮತ್ತು ಮಹಿಳೆಯರು ತಮ್ಮ ದೇಹಗಳಿಂದಲೇ ಭಿನ್ನರು; ಹಾಗಾಗಿಯೇ ಅವರು ವಹಿಸುವ ಪಾತ್ರಗಳೂ ಭಿನ್ನ ಎನ್ನುತ್ತವೆ). ಹಾಗೆಯೇ **ಪ್ರತಿಯೊಬ್ಬ** ಪುರುಷನೂ ಯಾವಾಗಲೂ ಪ್ರಬಲ ಸ್ಥಾನದಲ್ಲಿರುತ್ತಾನೆ ಮತ್ತು ಪ್ರತಿಯೊಬ್ಬ ಮಹಿಳೆಯೂ **ಅಬಲ** ಸ್ಥಾನದಲ್ಲಿರುತ್ತಾಳೆ ಎಂಬ ಪ್ರತಿಪಾದನೆಯನ್ನೂ ಕೂಡ.

ಪುರುಷರು ಮಹಿಳೆಯರಿಗಿಂತ ಶ್ರೇಷ್ಠರು, ಮಹಿಳೆಯರು ಪುರುಷರ ಆಸ್ತಿಯ ಒಂದು ಭಾಗವೇ ಆಗಿರುವುದರಿಂದ ಮಹಿಳೆಯರು ಯಾವಾಗಲೂ ಪುರುಷರ ನಿಯಂತ್ರಣದಲ್ಲಿರಬೇಕು ಎಂಬ ಸಿದ್ಧಾಂತವು ಈ ವ್ಯವಸ್ಥೆಯೊಂದಿಗೆ ಬೆಸೆದುಕೊಂಡಿದೆ. ಕೆಲವು ದಕ್ಷಿಣ ಏಶಿಯಾದ ಭಾಷೆಗಳಲ್ಲಿ, ಉದಾಹರಣೆಗೆ ಗಂಡನನ್ನು **ಸ್ವಾಮಿ, ಸೌಹಾರ್, ಪತಿ, ಮಾಲೀಕ್** ಎಂದೆಲ್ಲಾ ಕರೆಯಲಾಗುತ್ತದೆ. ಇವೆಲ್ಲಾ ಪದಗಳು **'ಯಜಮಾನ'** ಇಲ್ಲವೇ **'ದೇವರು'** ಎಂಬ ಅರ್ಥ ಕೊಡುತ್ತವೆ.

**ಪ್ರ : ಪಿತೃಪ್ರಧಾನತೆ ಎಲ್ಲ ಕಡೆಯೂ ಒಂದೇ ರೀತಿಯಾಗಿದೆಯೆ ?**

**ಉ :** ಇಲ್ಲ. ಯಾವಾಗಲೂ ಒಂದೇ ರೀತಿಯಾಗಿಲ್ಲ. ಒಂದೇ ಸಮಾಜದ ಬೇರೆಬೇರೆ ವರ್ಗಗಳಲ್ಲಿ ; ಬೇರೆ ಬೇರೆ ಸಮಾಜಗಳಲ್ಲಿ ; ಮತ್ತು ಚರಿತ್ರೆಯ ಬೇರೆ ಬೇರೆ ಕಾಲಘಟ್ಟಗಳಲ್ಲಿ ಅದರ ಸ್ವರೂಪ ಬೇರೆ ಬೇರೆಯಾಗಿರುವುದುಂಟು. ಪುರುಷರು ನಿಯಂತ್ರಕರೆನ್ನುವ ಸಾಮಾನ್ಯವಾದ ನೀತಿ ಮಾತ್ರ ಒಂದೇ ಆಗಿರುತ್ತದೆ ಇಲ್ಲೆಲ್ಲಾ. ಆದರೆ ನಿಯಂತ್ರಣದ ಸ್ವರೂಪ ಭಿನ್ನವಾಗಿರಬಹುದು. ಉದಾಹರಣೆಗೆ, ನಮ್ಮ ಅಜ್ಜಿಯಂದಿರ ಅನುಭವದ ಪಿತೃಪ್ರಧಾನತೆ ಇಂದಿನಂಥದ್ದೇ ಆಗಿರಲಿಲ್ಲ : ಒಬ್ಬ ಗಿರಿಜನ ಮಹಿಳೆಗೂ ಮತ್ತು ಒಬ್ಬ ಸವರ್ಣೀಯ ಹಿಂದೂ ಮಹಿಳೆಗೂ ಇದು ಭಿನ್ನ ಅನುಭವ ಕೊಡುತ್ತದೆ; ಅಮೇರಿಕದ ಮಹಿಳೆ ಮತ್ತು ಇಂಡಿಯಾದಲ್ಲಿನ ಮಹಿಳೆಯರ ಅನುಭವ ಒಂದೇ ಅಲ್ಲ. ಪ್ರತಿಯೊಂದು ಸಾಮಾಜಿಕ ವ್ಯವಸ್ಥೆ ಇಲ್ಲವೇ ಚಾರಿತ್ರಿಕ ಕಾಲಘಟ್ಟವೂ ಪಿತೃಪ್ರಧಾನತೆಯ ಕಾರ್ಯಶೀಲತೆಯಲ್ಲಿ ತನ್ನದೇ ಆದ ಭಿನ್ನತೆಯನ್ನು ಹೊಂದಿದೆ. ಇದು ಭಿನ್ನ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಚರಣೆಗಳನ್ನು ಅವಲಂಬಿಸಿರುತ್ತದೆ. ಇದನ್ನು ಮುಂದೆ ನಾವು ವಿವರವಾಗಿ ಚರ್ಚಿಸೋಣ. ಆದರೆ ಈ ಭಿನ್ನತೆಗಳನ್ನು ಕಂಡುಕೊಳ್ಳುವುದು ಇಲ್ಲಿ ಮುಖ್ಯವಾಗುತ್ತದೆ. ಏಕೆಂದರೆ ಹೀಗೆ ಮಾಡುವ ಮೂಲಕ ನಾವು ನಮ್ಮ ಪರಿಸ್ಥಿತಿಯನ್ನೂ ಹೆಚ್ಚು ಸರಿಯಾಗಿ ವಿಶ್ಲೇಷಿಸಿ ಅದರ ನಿರ್ವಹಣೆಯ ಸೂಕ್ತ ತಂತ್ರಗಳನ್ನು ಕಟ್ಟುವುದಕ್ಕೆ ಸಹಾಯವಾಗುತ್ತದೆ.

**ಪ್ರ : ಪಿತೃಪ್ರಧಾನ ವ್ಯವಸ್ಥೆಯಲ್ಲಿ ಪುರುಷರು ನಿಯಂತ್ರಿಸುವುದಾದರೂ ಏನನ್ನು ?**

**ಉ :** ಸಾಮಾನ್ಯವಾಗಿ ಮಹಿಳೆಯರ ಬದುಕಿನ ಈ ಕೆಳಕಂಡ ಕ್ಷೇತ್ರಗಳು ಪಿತೃಪ್ರಧಾನತೆಯ ಹಿಡಿತದಲ್ಲಿರುತ್ತವೆಯೆಂದು ಹೇಳಬಹುದು.

**1, ಮಹಿಳೆಯರ ಉತ್ಪಾದನಾ ಅಥವಾ ಶ್ರಮಶಕ್ತಿ**

ಮನೆಕೆಲಸ ಮತ್ತು ಹೊರಗಡೆಯ ಮಜೂರಿಯ ಕೆಲಸಗಳೆರಡರಲ್ಲೂ ಪುರುಷರು ಮಹಿಳೆಯರ ಉತ್ಪಾದಕತೆಯನ್ನು ನಿಯಂತ್ರಿಸುತ್ತಾರೆ. ಕುಟುಂಬದೊಳಗಡೆ ಮಹಿಳೆಯರು ಜೀವನ ಪರ್ಯಂತ ತಮ್ಮ ಮಕ್ಕಳಿಗೆ, ಗಂಡಂದಿರಿಗೆ ಮತ್ತು ಇತರ ಸದಸ್ಯರಿಗೆ ಎಲ್ಲ ಬಗೆಯ ಬಿಟ್ಟಿ ಸೇವೆಗಳನ್ನು ಒದಗಿಸುತ್ತಾರೆ. ಸಿಲ್ವಿಯಾ ವಾಲ್ಬಿ "ಪಿತೃಪ್ರಧಾನೋಪಾದಿಯ ಉತ್ಪಾದನೆ" ಎಂದು ಕರೆಯುವಂತೆ, ಮಹಿಳೆಯರ ಶ್ರಮವು ಅವರ ಗಂಡಂದಿರಿಂದ ಮತ್ತು ಅಲ್ಲಿರುವ ಇತರ ಸದಸ್ಯರಿಂದ ಸ್ವಾಧೀನಗೊಳಿಸಿಕೊಳ್ಳಲ್ಪಟ್ಟಿರುತ್ತದೆ. ಆಕೆ ಹೇಳುತ್ತಾರೆ- ಮನೆ ಮಡದಿಯರು, ಉತ್ಪಾದಿಸುವ ವರ್ಗವಾದರೆ ಗಂಡಂದಿರು ಸ್ವಾಧೀನಗೊಳಿಸಿಕೊಳ್ಳುವ ವರ್ಗ : ಅವರ ಬೆನ್ನು ಮುರಿಯುವ, ಕೊನೆಯಿಲ್ಲದ ಏಕ ಬಗೆಯ ಶ್ರಮವು ಕೆಲಸವೆಂದೇ ಪರಿಗಣಿತವಾಗಿಲ್ಲ ಮತ್ತು ಮನೆ

ಮಡದಿಯರು ಅವರ ಗಂಡಂದಿರ ಮೇಲೆ ಅವಲಂಬಿತರು ಎಂದೇ ನೋಡಲಾಗುತ್ತದೆ.

ಮನೆಯ ಹೊರಗಡೆಯೂ ಪುರುಷರು ಅನೇಕ ರೀತಿಯಲ್ಲಿ ಮಹಿಳೆಯರ ಶ್ರಮವನ್ನು ನಿಯಂತ್ರಿಸು ತ್ತಾರೆ. ತಮ್ಮ ಮಹಿಳೆಯರನ್ನು ಅವರ ಶ್ರಮ ಮಾರಿ ಕೊಳ್ಳುವಂತೆ ಒತ್ತಾಯಿಸುತ್ತಾರೆ ಇಲ್ಲವೇ ಅವರನ್ನು ಕೆಲಸಕ್ಕೆ ಹೋಗದಂತೆ ತಡೆಯುತ್ತಾರೆ. ಮಹಿಳೆಯರ ಸಂಪಾದನೆಯನ್ನು ಅವರು ತಮ್ಮದಾಗಿಸಿಕೊಳ್ಳ ಬಹುದು ; ತಮಗಿಷ್ಟ ಬಂದ ರೀತಿಯಲ್ಲಿ ಅವರನ್ನು ಕೆಲಸಕ್ಕೆ ಕಳಿಸುವುದು, ನಿಲ್ಲಿಸವುದು ಮಾಡಬಹುದು, ಹೀಗಾದಾಗ ಮಹಿಳೆಯರು ಉತ್ತಮ ಸಂಬಳದ ಕೆಲಸ ದಿಂದ ವಂಚಿತರಾಗುತ್ತಾರೆ, ಅತ್ಯಂತ ಕಡಿಮೆ ಮಜೂರಿಗೆ ಅವರು ತಮ್ಮ ಶ್ರಮವನ್ನು ಮಾರಿಕೊಳ್ಳಬೇಕಾಗುತ್ತದೆ ; ಇಲ್ಲವೇ ಮನೆಯೊಳಗಡೆಯೇ 'ಮನೆಯಾಧಾರಿತ ಉತ್ಪಾದನೆ'ಯೆನ್ನುವ ಅತ್ಯಂತ ಶೋಷಕಕಾರೀ ವ್ಯವಸ್ಥೆ ಯಲ್ಲಿ ಕೆಲಸಮಾಡಬೇಕಾಗುತ್ತದೆ.

ಮಹಿಳೆಯ ಶ್ರಮದ ಮೇಲಿನ ಇಂತಹ ನಿಯಂತ್ರಣ ಮತ್ತು ಶೋಷಣೆಯ ಅರ್ಥವೆಂದರೆ **ಪುರುಷರಿಗೆ ಪಿತೃ ಪ್ರಧಾನತೆಯಿಂದ ದ್ರವ್ಯರೂಪೀ ಲಾಭವಿದೆ ; ಮಹಿಳೆಯರ ದಾಸ್ಯದಿಂದ ಅವರಿಗೆ ನೇರವಾದ ಆರ್ಥಿಕ ಲಾಭವಿದೆ.** ಬೇರೆ ಮಾತುಗಳಲ್ಲಿ ಹೇಳ ಬೇಕೆಂದರೆ **ಪಿತೃಪ್ರಧಾನತೆಗೆ ಒಂದು ದ್ರವ್ಯರೂಪೀ ನೆಲೆಗಟ್ಟಿದೆ.**

**2. ಮಹಿಳೆಯರ ಸಂತಾನೋತ್ಪತ್ತಿ**

ಪುರುಷರು ಮಹಿಳೆಯರ **ಸಂತಾನೋತ್ಪಾದನಾ** ಶಕ್ತಿಯನ್ನೂ ನಿಯಂತ್ರಿಸುತ್ತಾರೆ. ಬಹುತೇಕ ಸಮಾಜ ಗಳಲ್ಲಿ ಮಹಿಳೆಯರಿಗೆ ತಮಗೆಷ್ಟು ಮಕ್ಕಳು ಬೇಕು, ಯಾವಾಗ ಬೇಕು, ಸಂತಾನ ನಿರೋಧ ಕ್ರಮಗಳನ್ನು ಬಳಸಬೇಕೇ ಬೇಡವೇ ಎಂದು ತೀರ್ಮಾನಿಸುವ ಇಲ್ಲವೇ ಗರ್ಭಪಾತಕ್ಕೆ ನಿರ್ಧರಿಸುವ ಯಾವುದೇ ಸ್ವಾತಂತ್ರ್ಯ ವಿರುವುದಿಲ್ಲ. ಅಲ್ಲಲ್ಲೇ ಇರುವ ಪುರುಷ ನಿಯಂತ್ರಣದ ಜತೆಗೆ ಚರ್ಚು ಇಲ್ಲವೇ ರಾಜ್ಯಾಂಗ (ಅಂದರೆ ಧರ್ಮ ಮತ್ತು ರಾಜಕೀಯ)ಗಳಂತಹ ಪುರುಷ ಪ್ರಧಾನ ಸಂಸ್ಥೆಗಳು ಮಹಿಳೆಯರ ಸಂತಾನೋ ತ್ಪತ್ತಿ ಸಾಮರ್ಥ್ಯದ ಮೇಲೆ ಕಟ್ಟು-ಕಟ್ಟಳೆಗಳನ್ನು ಹೇರುತ್ತವೆ. ಇದು **ಸಾಂಸ್ಥೀಕೃತಗೊಂಡ** ನಿಯಂತ್ರಣ. ಉದಾಹರಣೆಗೆ, ಕ್ಯಾಥೋಲಿಕ್ ಚರ್ಚಿನಲ್ಲಿ, ಪುರುಷ ಮತ್ತು ಮಹಿಳೆಯರು ಸಂತಾನ ನಿಯಂತ್ರಣ ವಿಧಾನ ಗಳನ್ನು ಬಳಸಬೇಕೇ ಬೇಡವೇ, ಎಂತಹ ವಿಧಾನಗಳು ಸ್ವೀಕಾರಾರ್ಹ ಸಾಧ್ಯ, ಮಹಿಳೆ ಬೇಡದ ಮಗುವನ್ನು ತೆಗೆಸ ಬೇಕೇ ಬೇಡವೇ ಎಂಬಿತ್ಯಾದಿಗಳನ್ನೆಲ್ಲ ಪುರುಷ ಧಾರ್ಮಿಕ ಶ್ರೇಣೀಕರಣವೇ ತೀರ್ಮಾನಿಸುತ್ತದೆ. ಯಾವಾಗ ಎಷ್ಟು ಮಕ್ಕಳನ್ನು ಪಡೆಯಬೇಕು ಅಥವಾ ಪಡೆಯದಿರಬೇಕು ಎಂಬ ಆಯ್ಕೆಯ ಸ್ವಾತಂತ್ರ್ಯಕ್ಕಾಗಿ ಪ್ರತಿಯೊಂದು ದೇಶದಲ್ಲೂ ಮಹಿಳೆಯರು ನಿರಂತರ ವಾಗಿ ನಡೆಸುತ್ತಾ ಬಂದಿರುವ ನೇರ ಹೋರಾಟ ಈ ನಿಯಂತ್ರಣ ಎಷ್ಟೊಂದು ಬಲವಾದದ್ದು ಮತ್ತು ಇದನ್ನು ಬಿಟ್ಟುಕೊಡಲು ಪುರುಷರು ಎಷ್ಟೊಂದು ಹಿಂಜರಿಯುತ್ತಾರೆ ಎಂಬುದರ ಸೂಚಕವಾಗಿದೆ. ಮುಂದಿನ ಭಾಗದಲ್ಲಿ ಇದೇಕೆ ಹೀಗೆ ಎಂದು ಚರ್ಚಿಸೋಣ.

ಆಧುನಿಕ ಸನ್ನಿವೇಶದಲ್ಲಿ, **ಪಿತೃಪ್ರಧಾನ ರಾಜ್ಯಾಂಗವು** ತನ್ನ ಕುಟುಂಬ ಯೋಜನಾ ಕಾರ್ಯ ಕ್ರಮಗಳ ಮೂಲಕ ಮಹಿಳೆಯರ ಸಂತಾನೋತ್ಪತ್ತಿ ಯನ್ನು ನಿಯಂತ್ರಿಸಲು ಪ್ರಯತ್ನಿಸುತ್ತದೆ. ರಾಜ್ಯಾಂಗವು ದೇಶದ ಜನಸಂಖ್ಯೆಯೆಷ್ಟಿರಬೇಕೆಂದು ತೀರ್ಮಾನಿಸಿ ಅದಕ್ಕನುಗುಣವಾಗಿ ಮಹಿಳೆಯರಿಗೂ ಮಕ್ಕಳನ್ನು ಹೊಂದಲು ಅಥವಾ ಹೊಂದದೇ ಇರಲು ಪ್ರೇರೇಪಿಸು ತ್ತದೆ. ಇಂಡಿಯಾದಲ್ಲಿ ಕುಟುಂಬವನ್ನು ಆದಷ್ಟೂ ಸಣ್ಣದಾಗಿಸಲು ಜನನ ನಿಯಂತ್ರಣದ ಯೋಜನೆಗಳು ಅತ್ಯುಗ್ರ ರೀತಿಯಲ್ಲಿ ಕಾರ್ಯಶೀಲಗೊಂಡಿವೆ. ಮಲೇಶಿಯಾದಲ್ಲಿ ದೇಶದ ಕೈಗಾರಿಕಾ ಉತ್ಪಾದನೆಗಳಿಗೆ ದೊಡ್ಡ ರೀತಿಯ ಮಾರುಕಟ್ಟೆಯನ್ನು ಕುಟುಂಬಗಳಲ್ಲಿ ಕಂಡುಕೊಳ್ಳಲಿಕ್ಕಾಗಿ / ನಿರ್ಮಿಸಲಿಕ್ಕಾಗಿ ಮಹಿಳೆಯರಿಗೆ ಏಳು ಮಕ್ಕಳನ್ನು ಹೊಂದುವಂತೆ ಕೇಳಿಕೊಳ್ಳಲಾಗಿದೆ. ಜನನ ಪ್ರಮಾಣವು ತುಂಬಾ ಕಡಿಮೆಯಿರುವ ಯೂರೋಪಿನಲ್ಲಿ ಹೆಚ್ಚು ಮಕ್ಕಳನ್ನು ಹೊಂದುವಂತೆ ಮಹಿಳೆಯರಿಗೆ ಅನೇಕ ಆಮಿಷಗಳನ್ನು ಒಡ್ಡಲಾಗುತ್ತದೆ. ಅವರಿಗೆ ದೀರ್ಘಕಾಲದ ಹೆರಿಗೆ ರಜೆ, ಅರೆಕಾಲಿಕ ಉದ್ಯೋಗಾವಕಾಶಗಳು, ಶಿಶುಪಾಲನಾ ಸೌಲಭ್ಯಗಳು ವಿಪುಲವಾಗಿ ದೊರೆಯುತ್ತವೆ. ಕೆಲವು ದೇಶಗಳಂತೂ

"ಪುರುಷರಿಗೆ ಹೆರಿಗೆ ರಜೆ"ಯನ್ನು ನೀಡುತ್ತವೆ. ಅರ್ಥಿಕತೆ ಬಯಸುವ ಶ್ರಮಕ್ಕನುಗುಣವಾಗಿ ರಾಜ್ಯಾಂಗದ ಸಿದ್ಧಾಂತ ಮತ್ತು ನೀತಿಗಳು ಬದಲಾಗುತ್ತವೆ. ಉದಾ: ಎರಡನೇ ಮಹಾಯುದ್ಧದ ನಂತರ ಜರ್ಮನಿಗೆ ದೇಶ ವನ್ನು ಮತ್ತೆ ಕಟ್ಟಲು ಶ್ರಮಶಕ್ತಿಯ ಅವಶ್ಯಕತೆಯಿದ್ದಾಗ ಮಹಿಳೆಯರಿಗೆ ಉದ್ಯೋಗಗಳಲ್ಲಿ ತೊಡಗಿ ದೇಶಕಟ್ಟುವಿಕೆ ಯಲ್ಲಿ ಭಾಗಿಗಳಾಗಲು ಕೇಳಿಕೊಳ್ಳಲಾಯಿತು. ವ್ಯತಿರಿಕ್ತ ವಾಗಿ, ಬ್ರಿಟನ್‌ನಲ್ಲಿ ಯುದ್ಧದಲ್ಲಿ ಗೆಲುವು ಸಾಧಿಸಿದ ನಂತರ, ಮುಂಚೂಣಿಯಲ್ಲಿದ್ದು ಕ್ರಿಯಾಶೀಲವಾಗಿ ಭಾಗ ವಹಿಸಿದ್ದ ಮಹಿಳೆಯರನ್ನು ಮನೆಗಳಿಗೆ ತೆರಳಿ ಪುರುಷರಿಗೆ ಶಾಂತಿಪಾಲನಾ ಕ್ರಿಯೆಗಳಿಗೆ ಅನುವು ಮಾಡಿಕೊಡು ವಂತೆ ಹೇಳಲಾಯಿತು. ಅಮೇರಿಕ ಸಂಯುಕ್ತ ಸಂಸ್ಥಾನದ 1950ರ ದಶಕದ ಬೇಬಿಬೂಮ್ ಇದ ಕ್ಕೊಂದು ಜ್ವಲಂತ ನಿದರ್ಶನ. ತಾಯ್ತನದ ಕಲ್ಪನೆ ಯೆಡೆಗಿನ ರಾಜ್ಯಾಂಗದ ಬಲವಾದ ಅನುಮೋದನೆ ಯನ್ನೂ ಇದು ತೋರಿಸುತ್ತದೆ.

ತಾಯ್ತನದ ಈ ಕಲ್ಪನೆಯೇ ಮಹಿಳೆಯರ ಸ್ಥಿತಿಗತಿ ಯನ್ನು ಕುರಿತ ರ‍್ಯಾಡಿಕಲ್ ಸ್ತ್ರೀವಾದದ ವಿಶ್ಲೇಷಣೆಯ ಕೇಂದ್ರವಾಗಿದೆ. ಅವರ ಪ್ರಕಾರ, ತಾಯ್ತನ ಮತ್ತು ಪೋಷಣೆಗಳು ಪಿತೃಪ್ರಧಾನ ಸಮಾಜಗಳಿಂದ ಮಹಿಳೆ ಯರ ಮೇಲೆ ಕೇವಲ ಅವರ ಮೇಲಷ್ಟೇ ಹೇರಲ್ಪಟ್ಟಿರು ವುದೇ ಅವರ ದಾಸ್ಯಕ್ಕೆ ಕಾರಣ. ಸಣ್ಣ ವಯಸ್ಸಿನ ಮಹಿಳೆಯರಿಗೆ ಸಾಕಷ್ಟು ಸಂತಾನ ನಿರೋಧೀ ಮಾಹಿತಿ ಯನ್ನು ಒದಗಿಸದೆಯೇ ತಾಯ್ತನವನ್ನು ಅವರ ಮೇಲೆ ಹೇರಲಾಗಿದೆ. ಲಭ್ಯವಿರುವ ಸಂತಾನ ನಿರೋಧಕಗಳು ಆರಾಮದಾಯಕವಲ್ಲದವು, ಸಂಬಲರ್ಹವಲ್ಲದವು. ದುಬಾರಿ ಮತ್ತು ಅಪಾಯಕಾರೀ ಪಿತೃಪ್ರಧಾನತೆಯು ಗರ್ಭಪಾತಗಳ ಮೇಲೆ ಮಿತಿಯೊಡ್ಡುತ್ತದೆ ಮತ್ತು ಕೆಲಸಮಯ ಅದನ್ನು ಸಂಪೂರ್ಣವಾಗಿ ತಳ್ಳಿಹಾಕುತ್ತದೆ. ಆದರೆ ಅದೇ ಸಮಯದಲ್ಲಿ ಲೈಂಗಿಕ ಸಂಬಂಧಗಳಲ್ಲಿ ಪಾಲ್ಗೊಳ್ಳುವ ತೀವ್ರ ಒತ್ತಡವನ್ನು ಮಹಿಳೆಯರ ಮೇಲೆ ಹೇರುತ್ತದೆ ಎಂದು ಅವರು ಪ್ರತಿಪಾದಿಸುತ್ತಾರೆ.

ಇನ್ನೂ ಮುಂದುವರೆದು, ಪಿತೃಪ್ರಧಾನತೆಯು ಮಹಿಳೆ ಯರನ್ನು ತಾಯಿಯರಾಗಲು ಒತ್ತಾಯಿಸುವುದು ಮಾತ್ರ ವಲ್ಲ, ಅವರ ತಾಯ್ತನ ಹೇಗಿರಬೇಕೆಂಬುದನ್ನೂ ನಿರ್ಧರಿ ಸುತ್ತದೆ. ತಾಯ್ತನದ ಈ ಕಲ್ಪನೆಯನ್ನು ಮಹಿಳೆಯರ ತುಳಿತದ ಮೂಲಗಳಲ್ಲೊಂದು ಎಂಬಂತೆ ನೋಡ ಲಾಗಿದೆ. ಏಕೆಂದರೆ ಇದು ಪಿತೃಪ್ರಧಾನತೆಯನ್ನು ನಿರಂತರಗೊಳಿಸುವ ಸ್ತ್ರೀ ಮತ್ತು ಪುರುಷ ಮಾದರಿ ಗಳನ್ನು ಸೃಷ್ಟಿಸುತ್ತದೆ; ಖಾಸಗಿ ಮತ್ತು ಸಾರ್ವಜನಿಕಗಳ ನಡುವಿನ ವಿಭಾಗೀಕರಣವನ್ನು ಇದು ಸೃಷ್ಟಿಸಿ ಬಲಗೊಳಿ ಸುತ್ತದೆ. ಇದು ಮಹಿಳೆಯರ ಸಂಚಾರ ಮತ್ತು ಬೆಳ ವಣಿಗೆಯನ್ನು ನಿರ್ಬಂಧಿಸುತ್ತಾ ಪುರುಷ ಪ್ರಾಬಲ್ಯವನ್ನು ಪೋಷಿಸುತ್ತದೆ.

### 3. ಮಹಿಳೆಯರ ಲೈಂಗಿಕತೆಯ ಮೇಲಿನ ನಿಯಂತ್ರಣ

ಮಹಿಳೆಯ ದಾಸ್ಯದ ಇನ್ನೊಂದು ಮುಖ್ಯ ಕ್ಷೇತ್ರ ಇದು. ಮಹಿಳೆಯರು ತಮ್ಮ ಪುರುಷರಿಗೆ ಅವರ ಇಚ್ಛೆ ಮತ್ತು ಅವಶ್ಯಕತೆಯನುಸಾರ ಲೈಂಗಿಕ ಸೇವೆಗಳನ್ನು ಒದಗಿಸಬೇಕು. ಪ್ರತಿ ಸಮಯದಲ್ಲೂ, ವಿವಾಹದ ಹೊರ ಗಡೆ ಮಹಿಳೆಯರ ಲೈಂಗಿಕ ಅಭಿವ್ಯಕ್ತಿಯನ್ನು ನಿಯಂತ್ರಿ ಸುವ ನೈತಿಕತೆ ಮತ್ತು ಕಾನೂನುಗಳ ಭದ್ರ ಕೋಟೆಯೇ ಇದೆ. ಆದರೆ ಪುರುಷರ ಸ್ವೇಚ್ಛಾಚಾರಿಕೆಗೆ ಮಾತು ಕುರುಡುಗಣ್ಣುಗಳನ್ನು ಹೊಂದಲಾಗಿದೆ.. ಇನ್ನೊಂದು ಅತಿರೇಕದಲ್ಲಿ ಪುರುಷರು ತಮ್ಮ ಹೆಂಡತಿಯರನ್ನು, ಹೆಣ್ಣು ಮಕ್ಕಳನ್ನು ಇಲ್ಲವೇ ತಮ್ಮ ಹದ್ದುಬಸ್ತಿನಲ್ಲಿರುವ ಇತರ ಮಹಿಳೆಯರನ್ನು ವೇಶ್ಯಾವೃತ್ತಿಗೆ ತಳ್ಳಲೂ ಬಹುದು. ಅಂದರೆ ಅವರ ಲೈಂಗಿಕತೆಯ ಮಾರಾಟ ಮಾಡಬಹುದು. 'ಮರ್ಯಾದೆ', 'ಅವಮರ್ಯಾದೆ' ಗಳೆಂಬ ಕಿಂದರಿ ಬಾರಿಸುವ ಮೂಲಕ ಮಹಿಳೆಯರ ಮೇಲೆ ಅತ್ಯಾಚಾರ ಮಾಡುವ ಇಲ್ಲವೇ ಅತ್ಯಾಚಾರದ ಭೆಯ ಒಡ್ಡುವುದು ಅವರ ಲೈಂಗಿಕತೆಯ ಮೇಲೆ ಸಾಧಿಸಿ ರುವ ಪ್ರಾಬಲ್ಯದ ಇನ್ನೊಂದು ಮುಖ. ಮಹಿಳೆಯರ ಲೈಂಗಿಕತೆಯನ್ನು ನಿಯಂತ್ರಿಸಲು ಅವರ ವೇಷಭೂಷಣ, ನಡವಳಿಕೆ ಮತ್ತು ಚಲನವಲನಗಳನ್ನು ಕೌಟುಂಬಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ನಡಾವಳಿ ಗಳ ಮೂಲಕ ಮೇಲ್ವಿಚಾರಣೆ ಮಾಡಲಾಗುತ್ತದೆ.

ರ‍್ಯಾಡಿಕಲ್ ಸ್ತ್ರೀವಾದಿ ವಿಶ್ಲೇಷಣೆಯ ಪ್ರಕಾರ, ಪಿತೃಪ್ರಧಾನತೆಯಲ್ಲಿನ ಮಹಿಳೆಯರು ಕೇವಲ ತಾಯಂ ದಿರು ಮಾತ್ರವಲ್ಲ ಲೈಂಗಿಕ ದಾಸಿಯರೂ ಹೌದು,

ಮತ್ತು ಮಹಿಳೆಯರನ್ನು ತಾಯಿಗಳಾಗಿ ಕಾಣುವ ಪಿತೃಪ್ರಧಾನ ಕಲ್ಪನೆಯು ಅವರನ್ನು ಸ್ವಂತ ಲೈಂಗಿಕತೆಯುಳ್ಳ ಜೀವಿಗಳಾಗಿ ಕಾಣಲು ನಿರಾಕರಿಸುತ್ತದೆ. ಅವರು ತಾಯಿಗಳಲ್ಲದೇ ಹೋದರೆ ಪುರುಷ ಸುಖಕ್ಕಾಗಿ ಇರುವ ಲೈಂಗಿಕ ವಸ್ತುಗಳು ಎಂಬುದು ಪುರುಷ ಸಂಸ್ಕೃತಿಯ ವ್ಯಾಖ್ಯೆ. ಇದರ ಪ್ರಕಾರ, ಎಲ್ಲ ಸಮಾಜಗಳಲ್ಲೂ ಅತ್ಯಾಚಾರ ಇರಬೇಕಾಗಿರಲಿಲ್ಲ, ಆದರೆ ಅದು ಪಿತೃಪ್ರಧಾನತೆಯ ಒಂದು ಪರಿಣಾಮಕಾರೀ ರಾಜಕೀಯ ಆಯುಧ. 'ಪ್ರಬಲ ವರ್ಗಗಳವರು ದುರ್ಬಲ ವರ್ಗಗಳವರ ದಮನಕ್ಕಾಗಿ ಬಳಸುವ ಒಂದು ರಾಜಕೀಯ ಕ್ರಿಯೆ ಎಂಬಂತೆ ನೋಡುತ್ತದೆ ಅದು. ರ್‍ಯಾಡಿಕಲ್ ಸ್ತ್ರೀವಾದಿಗಳು ಸಾಂಘೀಕೃತ ವೇಶ್ಯಾವಾಟಿಕೆ, ಅಶ್ಲೀಲ ಸಾಹಿತ್ಯ, ಮತ್ತು ಒತ್ತಾಯದ ದ್ವಿಲಿಂಗರತಿಗಳು ಕೂಡ ಪಿತೃಪ್ರಧಾನತೆ ಮಹಿಳೆಯರ ಲೈಂಗಿಕತೆಯನ್ನು ನಿಯಂತ್ರಿಸುತ್ತಿರುವುದರ ಉದಾಹರಣೆಗಳಾಗಿ ತೋರಿಸುತ್ತಾರೆ.

### 4. ಮಹಿಳೆಯರ ಸಂಚಾರ

ಮಹಿಳೆಯರ ಲೈಂಗಿಕತೆ, ಉತ್ಪಾದನೆ ಮತ್ತು ಸಂತಾನೋತ್ಪತ್ತಿಗಳನ್ನು ನಿಯಂತ್ರಿಸಬೇಕಾದರೆ ಪುರುಷರು ಮಹಿಳೆಯರ ಸಂಚಾರವನ್ನು ನಿಯಂತ್ರಿಸಬೇಕು. ಘರದಾ ಹೇರುವಿಕೆ, ಕೌಟುಂಬಿಕ ವಲಯ ಬಿಟ್ಟು ಹೋಗದಂತಹ ನಿಬಂಧನೆ, ಖಾಸಗಿ ಮತ್ತು ಸಾರ್ವಜನಿಕಗಳ ಕಟ್ಟುನಿಟ್ಟಿನ ವಿಭಾಗೀಕರಣ, ಪುರುಷರೊಂದಿಗೆ ಬೆರೆಯುವುದಕ್ಕೆ ನಿಬಂಧನೆ ಹೀಗೆ ಬೆಳೆಯುತ್ತಲೇ ಹೋಗುವ ಅಂಶಗಳೆಲ್ಲಾ ಮಹಿಳೆಯರ ಚಲನವಲನೆಗಳನ್ನು ಹಿಡಿದಿಡುತ್ತ ಅವರ ಸ್ವಾತಂತ್ರ್ಯ ಹರಣ ಮಾಡುತ್ತವೆ. ಇವು ವಿಶಿಷ್ಟ ರೀತಿಯವಾಗಿದ್ದು, ಮಹಿಳೆಯರಿಗೆ ಮಾತ್ರ ಅನ್ವಯಿಸುವಂತಹವು. ಪುರುಷರಿಗೆ ಇಂತಹ ನಿಂಬಂಧನೆಗಳಿಲ್ಲ.

### 5. ಆಸ್ತಿ ಮತ್ತು ಇತರ ಆರ್ಥಿಕ ಮೂಲಗಳು

ಬಹುತೇಕ ಆಸ್ತಿ ಮತ್ತು ಇತರೇ ಉತ್ಪಾದನಾ ಮೂಲಗಳು ಪುರುಷರಿಂದಲೇ ನಿಯಂತ್ರಿಸಲ್ಪಡುತ್ತ ಒಬ್ಬ ಪುರುಷರಿಂದ ಮತ್ತೊಬ್ಬ ಪುರುಷನಿಗೆ, ಸಾಮಾನ್ಯವಾಗಿ ತಂದೆಯಿಂದ ಮಗನಿಗೆ ವರ್ಗಾಯಿಸಲ್ಪಡುತ್ತವೆ. ಆಸ್ತಿಗಳನ್ನು ಹೊಂದುವ ಕಾನೂನು ರೀತ್ಯ ಹಕ್ಕನ್ನು ಹೊಂದಿದ್ದಾಗಲೂ ಮಹಿಳೆಯರಿಗೆ ಸಾಂಪ್ರದಾಯಿಕ ಆಚರಣೆಗಳ ವಿಷ ವರ್ತುಲ, ಭಾವನಾತ್ಮಕ ಒತ್ತಡಗಳು, ಸಾಮಾಜಿಕ ಕಟ್ಟು - ಕಟ್ಟಳೆಗಳು ಇತ್ಯಾದಿಗಳಿಂದ ಅದನ್ನು ಪಡೆಯಲು ಸಾಧ್ಯವಾಗಿರುವುದಿಲ್ಲ. ಅಲ್ಲದೆ ಕೆಲಸಮಯ ನೇರವಾದ ಹಿಂಸೆಯೂ ಇದಕ್ಕೆ ಕಾರಣವಾಗುವುದುಂಟು. ಬೇರೆ ಕೆಲವು ಸಂದರ್ಭಗಳಲ್ಲಿ ವೈಯಕ್ತಿಕ ಕಾನೂನುಗಳು ಇಂತಹವಕ್ಕೆ ಪ್ರೋತ್ಸಾಹದಾಯಕವಾಗುವ ಬದಲು ಕುತ್ತಾಗುವುದುಂಟು. ಅಂತೂ ಎಲ್ಲಾ ಸಂದರ್ಭಗಳಲ್ಲೂ ಮಹಿಳೆಯರಿಗೆ ಪ್ರತಿಕೂಲವಾದವುಗಳೇ. ವಿಶ್ವಸಂಸ್ಥೆಯ ಅಂಕಿ–ಅಂಶಗಳಿಂದ ಇದು ತುಂಬಾ ಸ್ಪಷ್ಟಗೊಳ್ಳುತ್ತದೆ: "ಪ್ರಂಪಚದ ಒಟ್ಟು ಕೆಲಸದ ಗಂಟೆಗಳ ಶೇಕಡ 60ಕ್ಕೂ ಹೆಚ್ಚು ಕೆಲಸವನ್ನು ಮಹಿಳೆಯರು ಮಾಡುತ್ತಾರೆ. ಆದರೆ ಅವರಿಗೆ ಸಿಗುವುದು ಪ್ರಪಂಚದ ಆದಾಯದ ಶೇಕಡ, ಹತ್ತರಷ್ಟು ಮತ್ತು ಪ್ರಪಂಚದ ಆಸ್ತಿಯ ಶೇಕಡ ಒಂದರಷ್ಟು ಮಾತ್ರ."

(ಮುಂದುವರಿಯುವುದು)

# ಬಡತನ ನಿರ್ಮೂಲನಾ ವಿಶಿಷ್ಟ ಕಾರ್ಯಕ್ರಮಗಳು

ಕಡುಬಡವರ, ದೀನದಲಿತರ ಮಹಾನ್ ಕಣ್ಮಣಿ ದಿ. ಶ್ರೀಮತಿ ಇಂದಿರಾಗಾಂಧಿಯವರು ಬಡಜನರ ಬಾಳನ್ನು ಉತ್ತಮಗೊಳಿಸಲು ಅವಿರತವಾಗಿ ಶ್ರಮಿಸುತ್ತಾ ತಮ್ಮ ಜೀವನವನ್ನೇ ತೇದರು. ಅವರ ಜೀವನ ಚರಿತ್ರೆಯು ಬಡತನದ ವಿರುದ್ಧ ಅವರ ಹೋರಾಟದ ಒಂದು ವೀರಗಾಥೆ. ಅವರ ಜನ್ಮದಿನ ದಂದು ಅವರ ಆಶೋತ್ತರಗಳನ್ನು ನೆರವೇರಿಸುವುದಕ್ಕಿಂತಲೂ ಹೆಚ್ಚಿನ ಕಾಣಿಕೆ ಬೇರೊಂದಿಲ್ಲ. ಈ ದಿಶೆ ಯಲ್ಲಿ ಕರ್ನಾಟಕ ಸರ್ಕಾರ "ಬಡತನ ನಿರ್ಮೂಲನಾ ಕಾರ್ಯಕ್ರಮ"ಗಳ ಅಡಿ ವಿವಿಧ ಯೋಜನೆಗಳನ್ನು ಹಮ್ಮಿಕೊಂಡು ಕಾರ್ಯಗತ ಮಾಡುತ್ತಿದೆ.

## ವಿಶೇಷ ಯೋಜನೆಗಳು

* 6 ಲಕ್ಷ ಯುವಕರಿಗೆ ಉದ್ಯೋಗ * ಪ್ರತಿ ಗ್ರಾಮಕ್ಕೂ ಕುಡಿಯುವ ನೀರಿನ ಸೌಲಭ್ಯ * ಗ್ರಾಮೀಣ ಹಾಗೂ ನಗರ ಕೊಳಚೆ ಪ್ರದೇಶವಾಸಿಗಳಿಗೆ 1,50,000 ಮನೆಗಳ ನಿರ್ಮಾಣ, ಹಳ್ಳಿಗೊಂದು ಶಾಲೆ, ತರಗತಿಗೊಬ್ಬ ಶಿಕ್ಷಕ. ಮಾರ್ಚ್ 94ರ ಒಳಗೆ 9980 ಶಿಕ್ಷಕರ ನೇಮಕಾತಿ * ರಸ್ತೆಗಳ ನಿರ್ಮಾಣ 20,000 ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡ : ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ಹಾಸ್ಟೆಲ್ ಸೌಕರ್ಯ * ಒಂದು ಲಕ್ಷ ಮಹಿಳೆಯರಿಗೆ ಸ್ವಾವಲಂಬಿಗಳಾಗಲು ನೆರವು * 20 ಕೋಟಿ ಮರಗಳನ್ನು ನೆಟ್ಟು ಕರ್ನಾಟಕದ ಹಸಿರಿನ ಸಿರಿಯನ್ನು ವರ್ಧಿಸುವ ಕಾರ್ಯಕ್ರಮ * 1ನೇ ತರಗತಿಯಲ್ಲಿ ಕಲಿಯುವ 12 ಲಕ್ಷ ಮಕ್ಕಳಿಗೆ ಉಚಿತ ಹಾಲು ಪೂರೈಕೆ * ಸ್ವಯಂಸೇವಾ ಸಂಸ್ಥೆಗಳಿಗೆ ಜನರಿಂದ ಪ್ರಾಯೋಜಿತ ಕಾರ್ಯಕ್ರಮಗಳಿಗಾಗಿ ಬೀಜಧನ ಸಹಾಯ * ಇಂದಿರಾ ಗ್ರಾಮ ಯೋಜನೆ ರಾಜ್ಯದಲ್ಲಿ ಪ್ರತಿ ಜಿಲ್ಲೆಗೂ ಒಂದು ಗ್ರಾಮದಂತೆ 20 ಮಾದರಿ ಗ್ರಾಮಗಳ ಅಭಿವೃದ್ಧಿ.

ಇವೆಲ್ಲ ಕಾರ್ಯಕ್ರಮಗಳನ್ನು ಮಾರ್ಚ್ 1994ರ ಒಳಗಾಗಿ ಪೂರ್ಣಗೊಳಿಸಲು ರೂ. 725 ಕೋಟಿ ಬೃಹತ್ ಮೊತ್ತವನ್ನು ಮೀಸಲಾಗಿಡಲಾಗಿದೆ.

— ಕರ್ನಾಟಕ ವಾರ್ತೆ

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ

ವಿಳಾಸ :
" ಮಾ ನ ಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067